KA / BG-GPO / 2515 / WPP-47 / 2006-2008




# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಅಕ್ಟೋಬರ್ ೦೪, ೨೦೦೭ (ಆಶ್ವಯುಜ ೧೨, ಶಕ ವರ್ಷ ೧೯೨೯) | ಸಂಚಿಕೆ ೪೦ |
|---|---|---|


## ಭಾಗ–೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಒಳಾಡಳಿತ ಸಚಿವಾಲಯ**

**ವಿಷಯ:** ಶೀ ಸಿ.ಕೆ.ರಾಜಶೇಕರ್, ಸಿಪಿಸಿ–163, ಬಾಳೆಹೊನ್ನೂರು ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಅರ್ಜಿ ಬಗ್ಗೆ–ಆದೇಶ.

**ಓದಲಾಗಿದೆ:**
1) ಶಿಸ್ತು ಪಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ ಆದೇಶ ಸಂಖ್ಯೆ:ಡಿಇ/1/ 2005 ದಿನಾಂಕ:26–04–2006
2) ಮೇಲ್ಮನವಿ ಪಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ ಮಂಗಳೂರು ಇವರ ಆದೇಶ ಸಂಖ್ಯೆ: ಸಿಬ್ಬಂದಿ–2/ಮೇಲ್ಮನವಿ/10/2006 ದಿನಾಂಕ:04–12–2006
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:08–01–2007
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು2/150/2006–07 ದಿನಾಂಕ:05–05–2007

**ಪ್ರಸ್ತಾವನೆ:**

ಶೀ ಸಿ.ಕೆ.ರಾಜಶೇಕರ್, ಸಿಪಿಸಿ–163, ಬಾಳೆಹೊನ್ನೂರು ಪೊಲೀಸ್ ಠಾಣೆ ಚಿಕ್ಕಮಗಳೂರು ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ **6**ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:–**

೧) " ಕೊಪ್ಪ ಪೊಲೀಸ್ ಠಾಣೆ ಮೊ.ನಂ.83/2005 ಕಲಂ:86,87 ಕರ್ನಾಟಕ ಅರಣ್ಯ ಕಾಯ್ದೆ ಮತ್ತು 379 ಐಪಿಸಿ ಪಕರಣದ ಆರೋಪಿಗಳೊಂದಿಗೆ ಶಾಮೀಲಾಗಿ ಪೊಲೀಸ್ ಇಲಾಖೆಯ ಗೌರವಕ್ಕೆ ಕುಂದುಂಟಾಗಲು ಕಾರಣರಾಗಿರುತ್ತೀರಿ."

೨) "ಈ ಪಕರಣದ ಆರೋಪಿಗಳು ಶೀಗಂಧ ಕಳವು ಮಾಡುವಾಗ ಸಿಕ್ಕಿ ಬಿದ್ದು, ಸದರಿ ಆರೋಪಿಗಳೊಂದಿಗೆ ಮೊಬೈಲ್ ದೂರವಾಣಿ ನಂ:9448493887ರಲ್ಲಿ ಸಂಪರ್ಕವನ್ನು ಇಟ್ಟುಕೊಂಡು ಕಾನೂನು ಬಾಹಿರ ಚಟುವಟಿಕೆಗಳಲ್ಲಿ ಭಾಗಿಯಾಗಿರುತ್ತೀರಿ."

೩) "ಈ ಪಕರಣದ ಆರೋಪಿಗಳು ಶೀಗಂಧ ಕಳ್ಳತನ ಮಾಡುವಾಗ ಸಿಕ್ಕಿಬಿದ್ದ ಸಮಯದಲ್ಲಿ ಆರೋಪಿಯಾದ ಕೃಷ್ಣ ಎಂಬುವನ ಮೊಬೈಲ್ ಫೋನ್ ನಂ.9448766675ಗೆ ಸತತವಾಗಿ ಕರೆಗಳು ಬಂದಿದ್ದು, ಈ ಕರೆಗಳನ್ನು ಮಾಡಿದ ವ್ಯಕ್ತಿ ಯಾರೆಂದು ತಿಳಿಯಲು, ಕೊಪ್ಪ ಪೊಲೀಸ್ ಠಾಣೆ ಅಧಿಕಾರಿ ಮತ್ತು ಸಿಬ್ಬಂದಿಗಳು ಪಯತ್ನ ನಡೆಸಲಾಗಿ ಸಿಪಿಸಿ–**163** ರಾಜಶೇಖರ, ಬಾಳೆಹೊನ್ನೂರು ಠಾಣೆರವರೇ ಆರೋಪಿ ಕೃಷ್ಣನ ಮೊಬೈಲ್ ದೂರವಾಣಿಗೆ ಸತತವಾಗಿ ಕರೆ ಮಾಡಿದ ಬಗ್ಗೆ ಸಾಬೀತಾಗಿರುತ್ತದೆ."

೪) " ಶಿಸ್ತಿನ ಪೊಲೀಸ್ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಸಿಪಿಸಿ–163 ರಾಜಶೇಖರ ಆದ ನೀವು ಬಾಳೆಹೊನ್ನೂರು ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿ:12–08–2005 ರಂದು ಯಾವುದೇ ಮೇಲಾಧಿಕಾರಿಗಳ ಅನುಮತಿಯನ್ನು ಪಡೆದುಕೊಳ್ಳದೆ ಬಾಳೆಹೊನ್ನೂರು ಪೊಲೀಸ್ ಠಾಣಾ ಸರಹದ್ದನ್ನು

ಬಿಟ್ಟು ಕೊಪ್ಪ ಪೊಲೀಸ್ ಠಾಣಾ ಸರಹದ್ದಿನಲ್ಲಿ ಸಮಾಜ ಘಾತುಕ ವ್ಯಕ್ತಿಗಳೊಂದಿಗೆ ಶಾಮೀಲಾಗಿ ಇಲಾಖಾ ಮರ್ಯಾದೆಗೆ ಕುಂದುಂಟಾಗಲು ಕಾರಣಕರ್ತರಾಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:26-04-2006ರ ಆದೇಶದಲ್ಲಿ ಅರ್ಜಿದಾರರ ಮೂಲ ವೇತನವನ್ನು ಸಿಪಿಸಿ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ವೇತನಕ್ಕೆ ಮೂರು ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಇಳಿಸಲಾಗಿದೆ. ತರುವಾಯ ಹೊಸದಾಗಿ ವಾರ್ಷಿಕ ವೇತನ ಬಡ್ತಿ ಪಡೆಯಲು ಅರ್ಹರಿರುತ್ತಾರೆ. ಹಾಗೂ ಅಮಾನತ್ತಿನಲ್ಲಿ ಕಳೆದ ಅವಧಿ 01-09-2005ರಿಂದ ಈ ಆದೇಶವು ಆಪಾದಿತರಿಗೆ ಜಾರಿಯಾದ ದಿನಾಂಕದವರೆಗೆ ಕಳೆದ ಕಾಲವನ್ನು ಅಮಾನತ್ತಿನಲ್ಲಿ ಕಳೆದ ಕಾಲವೆಂದು ಪರಿಗಣಿಸಲಾಗಿದೆ. ಇವರು ಅಮಾನತ್ತಿನಲ್ಲಿ ಪಡೆದ ಜೀವನಾಧಾರ ಬಡ್ತಿಗೆ ಸೀಮಿತಗೊಳಿಸಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ ಮಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:04-12-2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ನಿಮ್ಮ ಮೇಲಿನ ನಾಲ್ಕು ಆರೋಪಗಳು ಸಾಬೀತಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 204 ಪೊಸಿಅ 2007 ಬೆಂಗಳೂರು, ದಿನಾಂಕ:13-09-2007**

ಪಸ್ತಾವನೆಯಲ್ಲಿ ವಿವರಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಕೆ.ರಾಜಶೇಕರ್, ಸಿಪಿಸಿ-163, ಬಾಳೆಹೊನ್ನೂರು ಪೊಲೀಸ್ ಠಾಣೆ ಚಿಕ್ಕಮಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು)

ಪಿ.ಆರ್. 1740

**ವಿಷಯ:** ಶೀ ಗೋಪಾಲಕೃಷ್ಣ ಎ.ಹೆಚ್.ಸಿ. 386, ಸಿ.ಎ.ಆರ್. ಬೆಂಗಳೂರು ನಗರ, ರವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್ ಸಿಎಆರ್ (ದಕ್ಷಿಣ) ಬೆಂಗಳೂರು ಇವರ ಆದೇಶ ಸಂಖ್ಯೆ:ರೂಲ್-7/25(63)2005-06 ದಿನಾಂಕ:24-02-2006
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಕಮೀಷನರ್ ಸಿಎಆರ್ ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:18/ಅಪೀಲು/2006 ದಿನಾಂಕ:23-10-2006
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:12-03-2007
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/1/2007-08 ದಿನಾಂಕ:12-07-2007

**ಪ್ರಸ್ತಾವನೆ:**

ಶ್ರೀ ಗೋಪಾಲಕೃಷ್ಣ ಎ.ಹೆಚ್.ಸಿ. 386, ಸಿ.ಎ.ಆರ್. ಬೆಂಗಳೂರು ನಗರ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7ರಡಿ ದೋಷಾರೋಪಣ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:-**

ಎ.ಹೆಚ್.ಸಿ.386 ಗೋಪಾಲಕೃಷ್ಣ **ಜಿ** ಪಂಗಡ ಆದ ನೀವು ದಿ:19-02-1979 ರಿಂದ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೀರಿ ನಿಮಗೆ ಸಿಎಆರ್(ದ) ಘಟಕದ ಸರ್ಕಾರಿ ವಸತಿ ಗೃಹವನ್ನು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿರುತ್ತದೆ. ದಿ:29-12-2005 ರಂದು ಬೆಳಗ್ಗೆ 05:00 ಗಂಟೆಗೆ ತುರ್ತು ಕರ್ತವ್ಯದ ನಿಮಿತ್ತ ಮುಂಜಾಗ್ರತ ಕರೆಯನ್ನು ನೀಡಲಾಗಿದ್ದರೂ ಸಹ ಸರಿಯಾದ ಸಮಯಕ್ಕೆ ಹಾಜರಾಗದೇ ಇರುತ್ತೀರಿ. ಇದರಿಂದ ನಿಮ್ಮ ಕರ್ತವ್ಯ ನಿರ್ಲಕ್ಷತೆ ಹಾಗೂ ಆದೇಶ ಉಲ್ಲಂಘನೆ ದುರ್ವರ್ತನೆ ಪದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್ ಸಿಎಆರ್ (ದಕ್ಷಿಣ) ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:24-02-2006ರ ಆದೇಶದಲ್ಲಿ ಅರ್ಜಿದಾರರರಿಗೆ ಎಚ್ಚರಿಕೆ ನೀಡಿ ಮೂರು ತಿಂಗಳ ಕಾಲ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಪರ ಪೊಲೀಸ್ ಕಮೀಷನರ್ ಸಿಎಆರ್ ಬೆಂಗಳೂರು ನಗರ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:23-10-2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ. ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು

ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತುರ್ತು ಕರ್ತವ್ಯದ ನಿಮಿತ್ತ ಮುಂಜಾಗತ ಕರೆಯನ್ನು ನೀಡಲಾಗಿದ್ದರೂ ಸಹ ಸರಿಯಾದ ಸಮಯಕ್ಕೆ ಹಾಜರಾಗದಿರುವುದರಿಂದ, ಇವರ ಮೇಲಿನ ಆರೋಪವು ಸಾಬೀತಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಕ್ಷಿಯಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 194 ಪೊಸಿಅ 2007 ಬೆಂಗಳೂರು, ದಿನಾಂಕ:19–09–2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗೋಪಾಲಕೃಷ್ಣ ಎ.ಹೆಚ್.ಸಿ. 386, ಸಿ.ಎ.ಆರ್. ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು)

ಪಿ.ಆರ್. 1741

**ವಿಷಯ:** ಶ್ರೀ ಎಂ.ಕೆ ಅನಿಲ್‌ಕುಮಾರ್, ಮಾಜಿ ಪಿಸಿ–522 ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್ ಶಿವಮೊಗ್ಗ ಇವರ ಆದೇಶ ಸಂಖ್ಯೆ:212/ಇವಿ–6/2002–03 ಅ.ಕ.ಸಂಖ್ಯೆ:82/03–04, ದಿನಾಂಕ:16/7/2003
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಐ.ಜಿ.ಪಿ., ಕೆ.ಎಸ್.ಆರ್.ಪಿ. ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/3/2003–04 ದಿನಾಂಕ:4/3/2006
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:17/4/2006
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/71/2006, ದಿನಾಂಕ:3/3/2007

**ಪ್ರಸ್ತಾವನೆ:**

ಶ್ರೀ ಎಂ.ಕೆ. ಅನಿಲ್‌ಕುಮಾರ್ ಮಾಜಿ ಪಿಸಿ–522 ಶಿವಮೊಗ್ಗ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

(1) ಎಂ.ಕೆ. ಅನಿಲ್‌ಕುಮಾರ್, ಪಿಸಿ–195, ಡಿ–ದಳ, 8ನೇ ಪಡೆ, ಕೆ.ಎಸ್.ಆರ್.ಪಿ., ಶಿವಮೊಗ್ಗ ಆದ ನೀವು ದಿನಾಂಕ:18/12/2002 ರ ಬೆಳಿಗ್ಗೆ ಸುಮಾರು 10.45 ಘಂಟೆ ಸಮಯದಲ್ಲಿ ಕವಾಯತು ಮೈದಾನದಲ್ಲಿ ಡಿ–ದಳದ ಕಂಪನಿ ಕಮಾಂಡರ್, ಶ್ರೀ ಎ.ಕೆ.ನಾಗಪ್ಪ, ಆರ್.ಪಿ.ಐ. ರವರಿಗೆ ನೀನು ಕಂಪನಿ ಕಮಾಂಡರ್ ದಾದಾಗಿರಿ ಮಾಡುತ್ತೀಯಾ, ನೀನೇನು ಹಿಟ್ಲರನಾ, ನೀನು ತೊಘಲಕ್ ದರ್ಬಾರ್ ಮಾಡುತ್ತೀಯಾ, ನಿನ್ನನನ್ನು ನಾನು ಸುಮ್ಮನೆ ಬಿಡುವುದಿಲ್ಲ, ಮೊನಾಪಲಿಮ ಮಾಡುತ್ತೀಯಾ ನಾನು ಮುಖ್ಯಮಂತ್ರಿಯನ್ನು ಕಾಣುತ್ತೇನೆ. ನಮ್ಮ ತಾಲ್ಲೂಕು ಎಂ.ಎಲ್.ಎ.ಗೆ ಹೇಳಿ ನಿನ್ನನ್ನು ಅನ್ನ–ನೀರು ಸಿಗದ ಜಾಗಕ್ಕೆ ನಿನ್ನನ್ನು ವರ್ಗಾವಣೆ ಮಾಡಿಸುತ್ತೇನೆ ಎಂದು ಎತ್ತರದ ಧ್ವನಿಯಲ್ಲಿ ಏಕವಚನದಲ್ಲಿ ಕೂಗಿತ್ತಾ, ಕೈಗಳನ್ನು ಮೇಲೆತ್ತಿ ಹೊಡೆಯಲು ಪ್ರಯತ್ನಿಸಿದ್ದು, ತನ್ಮೂಲಕ ತೀವ್ರ ಅಶಿಸ್ತು ಅವಿಧೇಯತೆ ಮತ್ತು ದುರ್ನಡತೆ ಪ್ರದರ್ಶಿಸಿ ಒಬ್ಬ ಪೊಲೀಸ್ ಅಧಿಕಾರಿಗೆ ಉಚಿತವಲ್ಲದ ರೀತಿಯಲ್ಲಿ ವರ್ತಿಸಿದ್ದೀರಿ.

(2) ನೀವು ದಿನಾಂಕ:18/12/2002ರ ಬೆಳಿಗ್ಗೆ ಸುಮಾರು 10.45ರ ಸಮಯದಲ್ಲಿ ಕವಾಯತು ಮೈದಾನದಲ್ಲಿ ಶ್ರೀ ಬಿ.ದೇವೇಂದ್ರಪ್ಪ, ಸಹಾಯಕ ಕಮಾಂಡೆಂಟ್, ಬಿ–ವಿಭಾಗ ಇವರಿಗೆ ನೀವು ದಾದಾಗಿರಿ ಮಾಡುತ್ತೀರಿ, ಮೊನೊಪಲಿ ಮಾಡುತ್ತೀರಿ, ನನಗೆ ಐ.ಜಿ.ಪಿ., ಎ.ಡಿ.ಜಿ.ಪಿ. ಮತ್ತು ರಾಜಕೀಯ ವ್ಯಕ್ತಿಗಳು ಗೊತ್ತು, ನನಗೆ ನೀವೇನೂ ಮಾಡುವುದಕ್ಕೆ ಆಗುವುದಿಲ್ಲ ಎಂದು ಎತ್ತರದ ಧ್ವನಿಯಲ್ಲಿ ಕೂಗುತ್ತಾ, ಕೈಗಳನ್ನು ಮೇಲೆತ್ತಿ ಹೊಡೆಯಲು ಪ್ರಯತ್ನಿಸಿದ್ದೀರಿ, ತನ್ಮೂಲಕ ತೀವ್ರ ಅಶಿಸ್ತು, ಅವಿಧೇಯತೆ ಮತ್ತು ದುರ್ನಡತೆ ಪ್ರದರ್ಶಿಸಿದ್ದೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್ ಶಿವಮೊಗ್ಗ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:16/7/2003ರ ಆದೇಶದಲ್ಲಿ

ಅರ್ಜಿದಾರರಿಗೆ ಇವರ ವಾರ್ಷಿಕ ವೇತನ ಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ಎರಡು ವರ್ಷಗಳ ಅವಧಿಗೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಐ.ಜಿ.ಪಿ., ಕೆ.ಎಸ್.ಆರ್.ಪಿ. ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:4:3:2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ತೀವ್ರ ಅಶಿಸ್ತು ಅವಿಧೇಯತೆ ಮತ್ತು ದುರ್ನಡತೆ ಇಲಾಖಾ ವಿಚಾರಣೆಯಿಂದ ಸಾಬೀತಾಗಿರುವುದರಿಂದ. ಶಿಸ್ತು ಪ್ರಾಧಿಕಾರ ಅರ್ಜಿದಾರರಿಗೆ ಇನ್ನೂ ತೀವ್ರ ದಂಡನೆ ವಿಧಿಸಬೇಕಾಗಿತ್ತು. ಈ ಹಿನ್ನೆಲೆಯಲ್ಲಿ ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸಬಹುದಾದ ಯಾವುದೇ ಹೊಸ ಅಂಶಗಳು ಕಂಡುಬರುತ್ತಿಲ್ಲವಾದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಅಧೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ/121/ಪೊಸಿಅ/2007, ಬೆಂಗಳೂರು ದಿನಾಂಕ:30–6–2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ.ಕೆ.ಅನಿಲ್‌ಕುಮಾರ್, ಮಾಜಿ ಪಿ.ಸಿ.–522 ಕೆ.ಎಸ್.ಆರ್.ಪಿ. ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು)

ಪಿ.ಆರ್. 1313

**ವಿಷಯ:** ಶ್ರೀ ಜಗದೀಶ್, ಪಿಸಿ.1842, ಮಳಖೇಡ್ ಪೊಲೀಸ್ ಠಾಣೆರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:26/ಡಿಇ/2000 DOB No. 606/2000 ದಿನಾಂಕ:25–04–2004.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ IGP/ಈವ/ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಅಪೀಲು 61/ಈವ/2004 ಆಪು ಸಂ.798/ಈವ/2004 ದಿನಾಂಕ 27/12/2004
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ 25–7–2005.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು12/127/2005 ದಿ: 21/11/2006

**ಪ್ರಸ್ತಾವನೆ:**

ಶ್ರೀ ಜಗದೀಶ, ಪಿಸಿ–1842, ಗುಲ್ಬರ್ಗಾ ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**<u>ದೋಷಾರೋಪಣೆ:</u>**

1. "ದಿನಾಂಕ:15/4/2000 ರಿಂದ 16/4/2000 ರವರೆಗೆ ನಿಮಗೆ ಯಡಗಾ ಗ್ರಾಮಕ್ಕೆ ಮೋಹರಂ ಬಂದೋಬಸ್ತ ಕರ್ತವ್ಯಕ್ಕೆ ನೇಮಿಸಲಾಗಿತ್ತು. ದಿನಾಂಕ:16/4/2000 ರಂದು ರಾತ್ರಿ 8.00 ಗಂಟೆ ಸುಮಾರಿಗೆ ಆಲಂದಫನ ಮೆರವಣಿಗೆ ಹೊರಬಿದ್ದು, ಆ ಸಮಯದಲ್ಲಿ ನೂಕು–ನುಗ್ಗಲು ನಡೆಯುತ್ತಿದ್ದು, ನೀವು ನೋಡಿ ಶ್ರೀ ಸಿದ್ದನಗೌಡರ ಮನೆಗೆ ಹೋಗಿರುತ್ತೀರಿ. ಈ ರೀತಿಯಾಗಿ ನೀವು ಮೊಹರಂ ದಫನ್ ಮೆರವಣಿಗೆ ಮುಗಿಯುವವರೆಗೆ ಬಂದೋಬಸ್ತ್ ಕರ್ತವ್ಯ ಮಾಡದೇ ಕರ್ತವ್ಯದಲ್ಲಿ ವಿಫಲರಾಗಿರುತ್ತೀರಿ. ಇದರಿಂದ ಕುಮಾರಿ ಜಗಮ್ಮ ತಂದೆ ಸಂಗಪ್ಪಾ ಇವಳ ಕೊಲೆಯಾಗಿದ್ದು, ನೀವು ಇದಕ್ಕೆ ಎಡೆಮಾಡಿದಂತೆ ಆಗಿದೆ. ಈ ಬಗ್ಗೆ ಮಳಖೇಡ ಪೊಲೀಸ್ ಠಾಣೆಯಲ್ಲಿ ಗುನ್ನ ನಂ. 29/2000, ಕಲಂ 302 ಐಪಿಸಿ ನೇದ್ಧರಲ್ಲಿ ಗುನ್ನೆ ದಾಖಲಾಗಿದ್ದು ಇರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ., ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 25.4.2004ರ ಆದೇಶದಲ್ಲಿ ಅರ್ಜಿದಾರರ 1) His next Annual Increment is postponed for one year without affecting future increments. 2) His suspension period from 27.4.2000 is treated as such limiting to subsistence allowance ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಐ.ಜಿ.ಪಿ., ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 22-7-2005 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆ ಹಾಗೂ ಕ್ರಿಮಿನಲ್ ಮೊಕದ್ದಮೆ ಬೇರೆಬೇರೆ ಪ್ರಕ್ರಿಯೆಯಾಗಿರುತ್ತದೆ, ಹಾಗೂ ಅರ್ಜಿದಾರರು ಕರ್ತವ್ಯ ಪಾಲನೆಯಲ್ಲಿ ಅತೀವ ನಿರ್ಲಕ್ಷ್ಯತನ ಬೇಜವಾಬ್ದಾರಿತನ ತೋರಿದ್ದರಿಂದಲೇ ಒಬ್ಬ ವ್ಯಕ್ತಿಯ ಕೊಲೆಯಾಗಲು ಕಾರಣವಾಗಿರುವುದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 213 ಪೊಸಿಅ 2006 ಬೆಂಗಳೂರು ದಿನಾಂಕ: 16-6-2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಜಗದೀಶ್, ಪಿ.ಸಿ.1842 ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು)

ಪಿ.ಆರ್. 1266

**ವಿಷಯ:** ಶ್ರೀ ರಾಜ್‌ಕುಮಾರ್, ಸಿ.ಹೆಚ್.ಸಿ.509, ಔರದ್ ಪೊಲೀಸ್ ಠಾಣೆ, ಬೀದರ್ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೀದರ್ ಇವರ ಆದೇಶ ಸಂಖ್ಯೆ:21/ಡಿಇ/2004 ಅ.ಪು.ಸಂಖ್ಯೆ:228/2005, ದಿನಾಂಕ:28/8/2005
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಐ.ಜಿ.ಪಿ., (ಈಶಾನ್ಯ ವಲಯ), ಗುಲ್ಬರ್ಗಾ ಇವರ ಆದೇಶ ಸಂಖ್ಯೆ:ಅಪೀಲು/118/ಈ.ವ/2005/ ಆಪು.ಸಂ.80/ಈವ/2006/959 ದಿನಾಂಕ:10/2/2006
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:12/6/2006
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/2/76/2006-07, ದಿನಾಂಕ:25/9/2006

**ಪ್ರಸ್ತಾವನೆ:**

ಶ್ರೀ ರಾಜಕುಮಾರ್ ಸಿಹೆಚ್‌ಸಿ 509 ಬೀದರ್, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

ನೀವು ಬೇಮಲಖೇಡಾ ಪೊಲೀಸ್ ಠಾಣೆಯಲ್ಲಿ ಮುಖ್ಯ ಆರಕ್ಷಕನೆಂದು ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:10-3-04 ರಂದು 9-00 ಗಂಟೆ ಸುಮಾರಿಗೆ ಶ್ರೀ ಮನೋಹರ ತಂದೆ ಬಕ್ಕಪ್ಪ ಸಾ:ಕಾಪಾಕಪಳ್ಳಿ ಇವರ ದೂರಿನ ಮೇರೆಗೆ ರಾಜಕುಮಾರ ತಂದೆ ಅಚೆಪ್ಪ ಈತನ ವಿರುದ್ಧ ಬೇಮಲಖೇಡಾ ಪೊಲೀಸ್ ಠಾಣೆಯಲ್ಲಿ ಅಪರಾಧ ಸಂಖ್ಯೆ:18:04 ಕಲಂ 324 504 ರೆವಿ-34 ಐಪಿಸಿ ಕೇಸು ದಾಖಲು ಮಾಡಿದ್ದು, ಈ ಕೇಸ್‌ನಲ್ಲಿ ದಿನಾಂಕ:10-3-04 ರಂದು ಕೇಸ್‌ನಲ್ಲಿ ಭಾಗಿಯಾದ ಅರ್ಜಿದಾರ ಶ್ರೀ ಅಚೆಪ್ಪ ತಂದೆ ಗುಂಡಪ್ಪಾ ಔರಾದೇ ಇವರ ಮಗನಾದ ರಾಜಕುಮಾರ ಈತನನ್ನು ಹಿಡಿದು

ತಂದು ಪೊಲೀಸ್ ಠಾಣೆಯಲ್ಲಿ ಕೂಡಿಹಾಕಿ ಅನಾದಿಕೃತವಾಗಿಟ್ಟು ಪೊಲೀಸ್ ಠಾಣೆಯ ದಾಖಲೆಗಳಲ್ಲಿ ಕೂಡಲೆ ನಮೂದಿಸಲು ವಿಫಲರಾಗಿರುವರಲ್ಲದೇ, ಸದರಿ ರಾಜಕುಮಾರ ಈತನಿಗೆ ಬಿಡುಗಡೆ ಮಾಡಲೂ ನೀಲಕಂಠ ಎಂಬುವರ ಮುಖಾಂತರ ರೂ.1500 ಬೇಡಿಕೆ ಮಾಡಿ ರೂ.800 (ಎಂಟು ನೂರು) ಸಂಭಾವನೆ ಹಣ ಪಡೆದಿರುವುದು ಹಾಗೂ ಸದರಿ ಅರ್ಜಿದಾರನ ಮಗನಾದ ರಾಜಕುಮಾರ ನಡೆಸುತ್ತಿದ್ದ ಬಾಡಿಗೆ ಆಟೋ ನಂ.ಕೆಎ-39:2150 ರ ಮಾಲಿಕ ದಶರಥ ದೊಡ್ಡಮನಿ ಸಾ:ಮನ್ನಾಎಖೆಳ್ಳಿ ಇವರಿಗೆ ಹೆದರಿಸಿ, ಆಟೋ ಜಪ್ತಿ ಮಾಡಬೇಕಾಗುತ್ತದೆ ಎಂದು, ಅವರಿಂದಲೂ ಸಹ ರೂ.300-00 (ಮೂರು ನೂರು) ಸಂಭಾವನೆ ಹಣ ಪಡೆದು ನೀವು ನಿಮ್ಮ ಕರ್ತವ್ಯದಲ್ಲಿ ಲೋಪ ಮತ್ತು ಖಂಡನೀಯ ದುರ್ನಡತೆಯನ್ನು ಎಸಗಿರುವಿರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ., ಬೀದರ್ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:28/8/2005ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮಾಡಿ ಐದು ವರ್ಷಗಳ ಕಾಲ ತಡೆಹಿಡಿಯುವ ದಂಡನೆ ಹಾಗೂ ಅಮಾನತ್ತಿನ ಅವಧಿ ಅಮಾನತ್ತೆಂದೇ ಪರಿಗಣಿಸಿ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಐ.ಜಿ.ಪಿ., ಈಶಾನ್ಯ ವಲಯ, ಗುಲ್ಬರ್ಗಾ ಇವರು ಅಪೀಲುದಾರರ ಸೇವಾ ಹಿರಿಮೆಯನ್ನು ಗಮನದಲ್ಲಿರಿಸಿ ಇನ್ನು ಮುಂದೆ ಹೀಗಾಗದಂತೆ ನೋಡಿಕೊಳ್ಳಲು ಒಂದು ಅವಕಾಶವನ್ನು ಕಲ್ಪಿಸಿ, ಅವರ ವಿರುದ್ಧ ಎಸ್.ಪಿ.ಬೀದರ ಇವರು ತೆಗೆದುಕೊಂಡಿರುವ ಶಿಸ್ತಿನ ಕ್ರಮವನ್ನು ಮಾರ್ಪಡಿಸಿ, ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

ಶ್ರೀ ರಾಜಕುಮಾರ, ಸಿ.ಹೆಚ್.ಸಿ.-509, ಔರಾದ ಪೊಲೀಸ್ ಠಾಣೆ ಇವರ ವಾರ್ಷಿಕ ವೇತನ ಬಡ್ತಿಯ ಒಂದು ಹಂತವನ್ನು ಎರಡು ವರ್ಷಗಳವರೆಗೆ ಮುಂಬರುವ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರುವಂತೆ ಮುಂದೂಡಲಾಗಿದೆ ಮತ್ತು ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಸಂಭಾವನೆ ಪಡೆದಿರುವುದು ಇಲಾಖಾ ವಿಚಾರಣಾ ಸಾಕ್ಷಿ ಸಮಯದಲ್ಲಿ ಲಭ್ಯವಿಲ್ಲದಿದ್ದರೂ ಪಡೆದಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ ಅರ್ಜಿದಾರರ ಮೇಲೆ ಹೊರಡಿಸಲಾದ ಆರೋಪ ಗಂಭೀರ ಸ್ವರೂಪದ್ದಾಗಿದ್ದು ಪರೋಕ್ಷವಾಗಿ ಸಾಬೀತಾಗಿದೆ ಹಾಗೂ ಶಿಸ್ತುಪ್ರಾಧಿಕಾರ ವಿಧಿಸಿದ ದಂಡನೆಯನ್ನು ಮೇಲ್ಮನವಿ ಪ್ರಾಧಿಕಾರ ದಂಡನೆಯನ್ನು ಮಾರ್ಪಡಿಸಿರುವುದರಿಂದ ಈ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ/65/ಪೊಸಿಅ/2007, ಬೆಂಗಳೂರು ದಿ:22-6-2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ರಾಜ್‌ಕುಮಾರ್, ಸಿ.ಹೆಚ್.ಸಿ.-509, ಬೀದರ್ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

ಪಿ.ಆರ್. 1259 (ಪೊಲೀಸ್ ಸೇವೆಗಳು)

**ವಿಷಯ:** ಕ್ರಿಮಿನಲ್ ಅಪೀಲು ಸಂಖ್ಯೆ:1514/2002ರ ಪ್ರಕರಣದಲ್ಲಿ ಉಚ್ಚ ನ್ಯಾಯಾಲಯವು ನೀಡಿರುವ ತೀರ್ಪಿನ ಮೇರೆಗೆ ಶ್ರೀ ಜಿ. ಆನಂದ್, ಎಸ್‌ಪಿ ರವರ ವಿರುದ್ಧ ಇಲಾಖಾ ಶಿಸ್ತಿನ ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ:** 1) ಡಿಜಿ ಮತ್ತು ಐಜಿಪಿ ರವರ ಪತ್ರ ಸಂಖ್ಯೆ:ಸಿಬಿ(5)48/2005-06 ದಿನಾಂಕ 06-05-2006.

**ಪ್ರಸ್ತಾವನೆ:**

ಶ್ರೀ ಜಿ. ಆನಂದ್, ಎಸ್‌ಪಿ, ರಾಜ್ಯ ಗುಪ್ತವಾರ್ತೆ, ಬೆಂಗಳೂರು ಇವರು ಈ ಹಿಂದೆ ಪೊಲೀಸ್ ಇನ್ಸ್‌ಪೆಕ್ಟರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕೆಂಚಾರ್ಲಹಳ್ಳಿ ಪೊಲೀಸ್ ಠಾಣೆಯ ಮೊಕದ್ದಮೆ ಸಂಖ್ಯೆ:1514/2002 ಕಲಂ 302 ಐ.ಪಿ.ಸಿ/ ಪ್ರಕರಣದಲ್ಲಿ ತನಿಖೆಯನ್ನು ಸಮರ್ಪಕವಾಗಿ ನಡೆಸದೆ ಇದ್ದುದರಿಂದ ಹಾಗೂ ಸಾಕ್ಷಿ ಪುರಾವೆಗಳನ್ನು ಸಂಬಂಧಪಟ್ಟವರಿಂದ ಸಂಗ್ರಹಿಸಿ ನಿಗಧಿತ ಅವಧಿಯಲ್ಲಿ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದರಿಂದ, ಸೆಷನ್ಸ್ ನ್ಯಾಯಾಲಯದಲ್ಲಿ ಆರೋಪಿತರು

ವಿಚಾರಣೆಯಿಂದ ಖುಲಾಸೆ ಆಗಿರುತ್ತಾರೆ ಎಂದು ತಿಳಿಸಿ ಎಸ್.ಪಿ. ಕೋಲಾರ ಜಿಲ್ಲೆರವರು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಅದರಂತೆ ಸದರಿ ಅಧಿಕಾರಿಯವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ ಶಿಸ್ತು ನಡವಳಿ 1965/89ರ ನಿಯಮ 6 ಉಪ ನಿಯಮ(2)ರ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಡಿ.ಐ.ಜಿ.ಪಿ. ಅರಣ್ಯ ಘಟಕ, ಬೆಂಗಳೂರು ರವರನ್ನು ವಿಶೇಷ ಅಧಿಕಾರಹೊಂದಿದ ಇಲಾಖಾ ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಕೋರಿ ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ಸದರಿಯರವರ ವಿರುದ್ಧ ಹೊರಡಿಸಬಹುದಾದ ಆರೋಪದ ಬಗ್ಗೆ, ದೋಷಾರೋಪಣಾ ಪಟ್ಟಿ ತಯಾರಿಸಿ ಮೇಲೆ ಓದಲಾದ 1ರ ಪತ್ರದಲ್ಲಿ ಡಿ.ಜಿ. ಮತ್ತು ಐ.ಜಿ.ಪಿ. ರವರು ಸರ್ಕಾರಕ್ಕೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 222 ಪೊಸಿಪ 2006 ಬೆಂಗಳೂರು, ದಿನಾಂಕ:19-06-2007.**

ಶ್ರೀ ಜಿ. ಆನಂದ್, ಎಸ್‌ಪಿ, ರಾಜ್ಯ ಗುಪ್ತವಾರ್ತೆ, ಬೆಂಗಳೂರು ರವರು ಪೊಲೀಸ್ ಇನ್ಸ್‌ಪೆಕ್ಟರ್ ಆಗಿ ಚಿಂತಾಮಣಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕೆಂಚಾರ್ಲಹಳ್ಳಿ ಪೊಲೀಸ್ ಠಾಣೆ ಮೊಕದ್ದಮೆ ಸಂಖ್ಯೆ:1514/2002ರ ಕಲಂ 302, ಐ.ಪಿ.ಸಿ. ಪ್ರಕರಣದಲ್ಲಿ ತನಿಖೆಯನ್ನು ಸಮರ್ಪಕವಾಗಿ ನಡೆಸದ ಕಾರಣ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್, ಶಿಸ್ತು ನಡವಳಿ ನಿಯಮಗಳು, 1965/89ರ ನಿಯಮ 6ರ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಅರಣ್ಯ ಘಟಕ, ಬೆಂಗಳೂರು ರವರನ್ನು ವಿಶೇಷ ಅಧಿಕಾರಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಈ ವಿಚಾರಣೆಯಲ್ಲಿ ನಿಯಮಾನುಸಾರ ತನಿಖೆ ನಡೆಸಿ 3 ತಿಂಗಳೊಳಗಾಗಿ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು)

ಪಿ.ಆರ್. 1168

**ವಿಷಯ:** ಶ್ರೀ ಎಫ್.ಎ.ಟ್ರಾಸ್ಗರ್, ಡಿವೈ.ಎಸ್.ಪಿ. ರವರ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ:** 1) ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ:ಸಿಬಿ(5)22/2006-07 ದಿನಾಂಕ 28-11-2005.

**ಪ್ರಸ್ತಾವನೆ:**

ಶ್ರೀ ರಾಮಸಿರೋಮಣಿ ಉರುಫ್ ರಮಣಿ ನಿಹಾರ್ ಯಾದವ್ ಸಾಕೀನ್ ವಾಸ್ಕೋಡಿಗಾಮಾ, ಗೋವಾ ಇವರ ಪಿಸ್ತೂಲ್ ನಂ: 323305 ನ್ನು ಪೊಲೀಸ್ ಠಾಣೆಯ ಭದ್ರತೆಯಲ್ಲಿ ಇಡದೇ, ಕರ್ತವ್ಯ ಲೋಪ ಎಸಗಿರುತ್ತಾರೆಂದು ಶ್ರೀ ಎಫ್.ಎ.ಟ್ರಾಸ್ಗರ್, ಡಿವೈ.ಎಸ್.ಪಿ. ರವರ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಸೂಚಿಸಿ ಇಲಾಖಾ ವಿಚಾರಣಾಧಿಕಾರಿಯನ್ನು ನೇಮಿಸಲು ಕೋರಿದ್ದು ಈ ಕೆಳಗಿನಂತೆ ದೋಷಾರೋಪಣೆ ಹೊರಿಸಲಾಗಿದೆ.

**<u>ದೋಷಾರೋಪಣೆ:</u>**

ಶ್ರೀ ರಾಮಸಿರೋಮಣಿ ಉರುಫ್ ರಮಣಿ ನಿಹಾರ್ ಯಾದವ ಸಾ: ವಾಸ್ಕೋಡಿಗಾಮಾ, ಗೋವಾ ಇವರ ಪ್ರಕರಣ ಅಂತರ ರಾಜ್ಯಕ್ಕೆ ಸಂಬಂಧಪಟ್ಟಿದ್ದರ ಪ್ರಯುಕ್ತ ಅವರ ಆಯುಧ ವಿಚಾರಣೆಗಾಗಿ ಪೊಲೀಸ್ ಠಾಣೆಗೆ ತರುವ ಪೂರ್ವದಲ್ಲಿ ಮೇಲಾಧಿಕಾರಿಗಳಿಂದ ಅನುಮತಿ ಪಡೆದುಕೊಳ್ಳಬೇಕಾಗಿತ್ತು.

ಪಿಸ್ತೂಲ ಸಂ: 323305ನ್ನು ವಾಸ್ಕೋ ಪೊಲೀಸ್ ಠಾಣೆ ಅಪರಾಧ 173/98 ಕಲಂ 324, 506(II) ಸ.ಕ. 34 ಐಪಿಸಿ ಪ್ರಕಾರ ದಾಖಲಾದ ಪ್ರಕರಣದಲ್ಲಿ ಆಯುಧ ಠೇವಣಿ ಮಾಡಿಕೊಂಡ ನಂತರ ಶಸ್ತ್ರಾಸ್ತ್ರಗಳ ಅಧಿನಿಯಮ 21(1)ರ ಪ್ರಕಾರ ಹಾಗೂ ಕರ್ನಾಟಕ ರಾಜ್ಯ ಪೊಲೀಸ್ ಆದೇಶ ಕ್ರಮಾಂಕ 943, 946(3)ರ ಪ್ರಕಾರ ಠೇವಣಿ ಮಾಡಿಕೊಂಡು, ಜಿಲ್ಲಾ ಆಯುಧ ಸಂಗ್ರಹಕ್ಕೆ ಕಳುಹಿಸಿ, ಸ್ವೀಕೃತಿ ಪತ್ರ ಪಡೆದುಕೊಂಡಿರುವುದಿಲ್ಲ ಹಾಗೂ ಪೊಲೀಸ್ ಠಾಣೆ ದಾಖಲಾತಿ ಪುಸ್ತಕಗಳಲ್ಲಿ ನಿರ್ವಹಿಸಿಕೊಂಡು ಬಂದಿರುವುದಿಲ್ಲ.

ದಿನಾಂಕ: 08-08-1998ರಂದು ವಾಸ್ಕೋ ಪೊಲೀಸ್ ಠಾಣೆ ಅಪರಾಧ ಸಂಖ್ಯೆ: 173/98 ಕಲಂ 324, 506(II) ಸ.ಕ. 34 ಐಪಿಸಿ ಪ್ರಕಾರ ದಾಖಲಾದ ಪ್ರಕರಣದಲ್ಲಿ ಪಿಸ್ತೂಲ್ ನಂ: 323305ನ್ನು ಪರೇಶ ಗನ್ ಶಾಪ್, ಖಡೇಬಜಾರ, ಬೆಳಗಾವಿ ಇವರಿಂದ ವಶಪಡಿಸಿಕೊಂಡ ನಂತರ ಆಯುಧ ಅನುಜ್ಞಾ ಪತ್ರ ಪ್ರಾಧಿಕಾರಿಗಳಾದ ಜಿಲ್ಲಾ ದಂಡಾಧಿಕಾರಿ, ಗೋವಾ ರಾಜ್ಯ ಇವರಿಗೆ ತಿಳಿಸಲು ಮೇಲಾಧಿಕಾರಿಗಳಿಗೆ ವರದಿ ಕಳುಹಿಸಿರುವುದಿಲ್ಲ.

ನೀವು ಮಾರ್ಕೆಟ್ ಪೊಲೀಸ್ ಠಾಣೆಯಿಂದ ವರ್ಗವಾದ ನಂತರ ಶ್ರೀ ಪಿ.ಜಿ. ವಾಂಡಕರ, ಪಿಐ ರವರಿಗೆ ದಿನಾಂಕ: 01-07-2001ರಂದು ಪೊಲೀಸ್ ಠಾಣೆಯ ಪ್ರಭಾರವನ್ನು ವಹಿಸಿಕೊಡುವಾಗ ಪ್ರಭಾರ ಪಟ್ಟಿಯಲ್ಲಿ ಸದರಿ ಪಿಸ್ತೂಲ ನಂ: 323305 ರ ಬಗ್ಗೆ ನಮೂದಿಸಿರುವುದಿಲ್ಲ. ಆರಕ್ಷಕ ಅಧೀಕ್ಷಕರು, ಬೆಳಗಾವಿ ರವರ ಪತ್ರ ಸಂಖ್ಯೆ:1/ಆಯುಧ/485/05-06 ದಿನಾಂಕ 01-08-2006ರಲ್ಲಿ ಶ್ರೀ ಎಫ್.ಎ.ಟ್ರಾಸ್ಗರ್, ಡಿವೈ.ಎಸ್.ಪಿ. ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿ ಯಾವುದೇ ಮೇಲಾಧಿಕಾರಿಗಳ ಆದೇಶವಿಲ್ಲದೆ ಕಾನೂನು ಬಾಹಿರವಾಗಿ ಶ್ರೀರಾಮ ಶಿರೋಮಣಿ ಉರುಫ್ ರಮಣಿ ನಿಹಾರ್ ಯಾದವ ಸಾ: ವಾಸ್ಕೋಡಿಗಾಮಾ, ಗೋವಾ ಇವರಿಗೆ ಸಂಬಂಧಿಸಿದ ರಿವಾಲ್ವರ್ ಸಂಖ್ಯೆ:323305ನ್ನು ದುರಸ್ತಿಗಾಗಿ

ಮಾಲಿಕರು)ಕಡೆಯಿಂದ ಡಿಪಾಜಿಟ್ ಮಾಡಿಸಿಕೊಂಡು ಅವರಿಗೆ ಮರಳಿ ಕೊಟ್ಟಿರುವುದಿಲ್ಲ ಮತ್ತು ಠಾಣೆಯಲ್ಲಿ ಯಾವುದೇ ಆಯುಧ ರಿಜಿಸ್ಟರ್‌ಗಳಲ್ಲಿಯೂ ನಮೂದು ಮಾಡದೇ ತಮ್ಮ ಹತ್ತಿರ ಸ್ವಂತ ಲಾಭಕ್ಕಾಗಿ ಇಟ್ಟುಕೊಂಡು ಅಧಿಕಾರ ದುರುಪಯೋಗ ಮಾಡಿದ ಬಗ್ಗೆ ಸೂಕ್ತ ಕ್ರಮ ಜರುಗಿಸಲು ಕೋರಿರುತ್ತಾರೆ. ಸದರಿಯವರ ವಿರುದ್ಧ ಕೆ.ಎಸ್.ಪಿ (ಡಿ.ಪಿ) ನಿಯಮಗಳು, 1965/89ರ ನಿಯಮ 6ರ ಪ್ರಕಾರ ಇಲಾಖಾ ವಿಚಾರಣೆಗೆ ಆದೇಶಿಸುವಂತೆ ಮೇಲೆ ಓದಲಾದ(1)ರಲ್ಲಿ ಡಿಜಿ ಮರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 23 ಪೊಸಿಪ 2007 ಬೆಂಗಳೂರು, ದಿನಾಂಕ:14-06-2007.**

ಶ್ರೀ ಎಫ್.ಎ.ಟ್ರಾಸ್ಗರ್, ಡಿವೈ.ಎಸ್.ಪಿ. ರವರ ವಿರುದ್ಧ ಕೆ.ಎಸ್.ಪಿ (ಡಿ.ಪಿ) ನಿಯಮಗಳು, 1965/89ರ ನಿಯಮ 6ರ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಆದೇಶಿಸಿದೆ. ಈ ವಿಚಾರಣೆಯನ್ನು ನಡೆಸಲು ಪೊಲೀಸ್ ಅಧೀಕ್ಷಕರು, ಬೆಂಗಳೂರು ಜಿಲ್ಲೆ ರವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಈ ವಿಚಾರಣೆಯನ್ನು ನಿಯಮಾನುಸಾರ ತನಿಖೆ ನಡೆಸಿ 3 ತಿಂಗಳೊಳಗಾಗಿ ಅಂತಿಮ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು)

ಪಿ.ಆರ್. 1166

**ವಿಷಯ:** ಶ್ರೀ ಚೌಡನಾಯ್ಕ್, ಮಾಜಿ ಪಿಸಿ-702, ಡಿ-ದಳ, 5ನೇ ಪಡೆ ಕೆಎಸ್‌ಆರ್‌ಪಿ., ಮೈಸೂರು ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 5ನೇ ಪಡೆ, ಕೆಎಸ್‌ಆರ್‌ಪಿ ಮೈಸೂರು ಇವರ ಆದೇಶ ಸಂಖ್ಯೆ : ಇ.ಎಸ್.ಟಿ/2/ವಿ.ವ/41/2002-03, ದಿ : 11-10-2004.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಐ.ಜಿ.ಪಿ., ಕೆ.ಎಸ್.ಆರ್.ಪಿ., ಬೆಂಗಳೂರು ರವರ ಆದೇಶ ಸಂಖ್ಯೆ : ಅಪೀಲು/45/2004-05, ದಿನಾಂಕ : 14-6-2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 8-2-2004.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು/2/140/2005, ದಿನಾಂಕ : 28-6-2006.

**ಪ್ರಸ್ತಾವನೆ:**

ಶ್ರೀ ಚೌಡನಾಯ್ಕ್, ಮಾಜಿ ಪಿಸಿ-702, ಡಿ-ದಳ, 5ನೇ ಪಡೆ, ಕೆಎಸ್‌ಆರ್‌ಪಿ., ಮೈಸೂರು ರವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**<u>ದೋಷಾರೋಪಣೆ:</u>**

1) ಪಿಸಿ-702, ಚೌಡಾನಾಯ್ಕ್‌ರಾದ ಇವರು ಜವಾಬ್ದಾರಿಯುತ ಪೇದೆಯಾಗಿ ಶಿಸ್ತಿನ ಪಡೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ದಿನಾಂಕ : 29-7-2002 ರಂದು ಸುಮಾರು ರಾತ್ರಿ 12-00 ಗಂಟೆ ಸಮಯದಲ್ಲಿ ಕಾರ್ ಸಂಖ್ಯೆ: ಕೆಎ-07 ಎಂ 725 ರಲ್ಲಿ ತೇಗ ಮತ್ತು ಬೀಟೆ ಮರಗಳನ್ನು ಕಳ್ಳಸಾಗಣೆ ಮಾಡಿ ಸಿಕ್ಕಿ ಬಿದ್ದು ನ್ಯಾಯಾಲಯದಿಂದ 30 ದಿನಗಳ ಕಾಲ ನ್ಯಾಯಾಂಗ ಬಂಧನದಲ್ಲಿ ಇರುವುದು ಪಡೆಯ ಶಿಸ್ತು, ಘನತೆಗೆ ಕುಂದು ಬರುವಂತೆ ನಿಯಮಾವಳಿಗೆ ವಿರುದ್ಧವಾಗಿ ನಡೆದುಕೊಂಡಿರುವುದು ಅಪರಾಧವಾಗಿರುವುದು.
2) ಇವರು ಎಸ್.ಟಿ.ಎಫ್.ನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ : 14-7-2002 ರಂದು ಇವರಿಗೆ ಎಸ್.ಟಿ.ಎಫ್. ವಾಹನವಿರುವ ಸ್ಥಳದಲ್ಲಿ ಪಹರೆ ಕರ್ತವ್ಯಕ್ಕೆ ನೇಮಿಸಿದ್ದು, ಅಂದು ರಾತ್ರಿ ಅದೇ ವಾಹನದಲ್ಲಿ ಪೇದೆ ಚಾಲಕ ಕೆ.ಎಂ.ಜಮೇದಾರ್‌ರವರು ಆ ಊರಿನ ಶ್ರೀಮತಿ ಮಹದೇವಿಯವರೊಂದಿಗೆ ಅಸಭ್ಯವಾಗಿ ವರ್ತಿಸಲು ಸಹಕರಿಸಿ ಅವರನ್ನು ವಾಹನದೊಳಗೆ ಕರೆದುಕೊಳ್ಳಲು ಅನುವು ಮಾಡಿಕೊಟ್ಟು ಕರ್ತವ್ಯದಲ್ಲಿ ಅಸಭ್ಯತೆ ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುವುದು ನಿಯಮಾವಳಿಗೆ ವಿರುದ್ಧವಾಗಿದ್ದು ಅಪರಾಧವಾಗಿರುತ್ತದೆ.
3) ಇವರು ಎಸ್.ಟಿ.ಎಫ್.ನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ : 29-7-2002 ರಿಂದ 3-8-2002 ರವರೆಗೆ ವಿಶ್ರಾಂತಿ ಪಡೆದುಕೊಂಡು ದಿನಾಂಕ : 4-8-2002 ರಿಂದ ಎಸ್.ಟಿ.ಎಫ್. ಕರ್ತವ್ಯಕ್ಕೆ ಹೋಗಬೇಕಾಗಿದ್ದು, ಅಂದಿನಿಂದ ಯಾರ ಅನುಮತಿ ಅಥವಾ ರಜೆ ಪಡೆಯದೇ ಅನಧೀಕೃತ ಗೈರುಹಾಜರಿ ಹಾಗೂ ವಿಶ್ರಾಂತಿ ಪಡೆಯುವ

ಅಂದರೆ ವಿಶ್ರಾಂತಿ ಅವಧಿಯಲ್ಲಿ ಅಪರಾಧ ಮಾಡಿರುವುದರಿಂದ ದಿನಾಂಕ : 29-7-2002 ರಿಂದ 30-8-2002 ರವರೆಗೆ ಒಟ್ಟು 33 ದಿನಗಳು ಅನಧೀಕೃತ ಗೈರುಹಾಜರಿ ಎಂದು ಪರಿಗಣಿಸಿ ಮಹತ್ವದ ಕರ್ತವ್ಯಕ್ಕೆ ಅನಧೀಕೃತವಾಗಿ ಗೈರುಹಾಜರಾಗಿರುವುದರಿಂದ ಕರ್ನಾಟಕ ರಾಜ್ಯ ಪೊಲೀಸ್ ಕೈಪಿಡಿ 1967 ರ ಆದೇಶ ಸಂಖ್ಯೆ : 525 ಕೆ.ಸಿ.ಎಸ್.ಆರ್. ನಿಯಮ 103(ಎ)(11) ಪೊಲೀಸ್ ಕಾಯ್ದೆ 1963 ವಿಧಿ 133(ಬಿ)(2) ಉಲ್ಲಂಘಿಸಿರುವುದು ಅಪರಾಧವಾಗಿರುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಭೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, ಕೆ.ಎಸ್.ಆರ್.ಪಿ., ಮೈಸೂರು ಇವರು ಮೇಲೆ ಕ್ರಮ ಸಂಖ್ಯೆ : 1) ರಲ್ಲಿ ಓದಲಾದ ದಿನಾಂಕ : 11-10-2004ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ, ಗೈರುಹಾಜರಿಯಲ್ಲಿ ಗೈರುಹಾಜರಿಯೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಐ.ಜಿ.ಪಿ., ಕೆ.ಎಸ್.ಆರ್.ಪಿ., ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂಥಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 14-6-2005 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪೊಲೀಸ್ ಇಲಾಖೆಗೆ ಘನತೆ ತರುವ ಕೆಲಸ ಮಾಡುವ ಬದಲು ಒಬ್ಬ ಅಪರಾಧಿ ಮಾಡುವ ಕೃತ್ಯಗಳನ್ನು ಎಸಗಿರುವುದು ಸಾಭೀತಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/133/ಪೊಸಿಅ/2007, ಬೆಂಗಳೂರು, ದಿ: 13-7-2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಚೌಡನಾಯ್ಕ್, ಮಾಜಿ ಪಿಸಿ-702, ಡಿದಳ, 5ನೇ ಪಡೆ, ಕೆಎಸ್ಆರ್‌ಪಿ., ಮೈಸೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು)

ಪಿ.ಆರ್. 1323

**ವಿಷಯ:** ಶ್ರೀ ರುದ್ರಸ್ವಾಮಿ, ಪಿ.ಎಸ್.ಐ., ಮದ್ದೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ ರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ., ಮಂಡ್ಯ ಇವರ ಆದೇಶ ಸಂಖ್ಯೆ : ಸಿಬ್ಬಂದಿ-2/ಪಿ.ಆರ್-57/2003-04, ದಿನಾಂಕ : 20-4-2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಐ.ಜಿ.ಪಿ., ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ : ಅಪೀಲು/13/2005-06, ದಿನಾಂಕ : 23-9-2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 21-11-2005.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)/146/2005, ದಿನಾಂಕ : 26-9-2006.
5) ಕಾರ್ಯದರ್ಶಿ, ಕೆ.ಪಿ.ಎಸ್.ಸಿ. ರವರ ಪತ್ರ ಸಂಖ್ಯೆ: ಪಿ.ಎಸ್.ಸಿ /43/ ಸಿ.ಎನ್.ಎಸ್/2007, ದಿನಾಂಕ: 2-6-2007.

**ಪ್ರಸ್ತಾವನೆ:**

ಶ್ರೀ ರುದ್ರಸ್ವಾಮಿ, ಪಿ.ಎಸ್.ಐ., ಮದ್ದೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷಾರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

ಆಪಾದಿತ ಪೊಲೀಸ್ ಅಧಿಕಾರಿ ರವರುಗಳು ಶಿಸ್ತಿನ ಇಲಾಖೆಯ ನೌಕರರಾಗಿರುವ ಶ್ರೀ ರುದ್ರಸ್ವಾಮಿ, ಪಿ.ಎಸ್.ಐ., ಮದ್ದೂರು ಠಾಣೆಯ ಅಪರಾಧ ವಿಭಾಗದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದರು. 2004 ನೇ ಸಾಲಿನಲ್ಲಿ ಅಪರಾಧಕ್ಕೆ ಸಂಬಂಧಪಟ್ಟಂತೆ ಒಟ್ಟು 44 ಪ್ರಕರಣಗಳು ಸದರಿ ಪೊಲೀಸ್ ಠಾಣೆಯಲ್ಲಿ ದಾಖಲಾಗಿದ್ದು, ಆ ಪೈಕಿ ಈ ಕೆಳಕಂಡ 31 ಪ್ರಕರಣಗಳಲ್ಲಿ ಇವರು ಅಪರಾಧಿಗಳನ್ನು ಬಂದಿಸುವಲ್ಲಿ ಮತ್ತು ಕಳುವಾದ ವಸ್ತುಗಳನ್ನು ವಶಪಡಿಸಿಕೊಳ್ಳುವುದರಲ್ಲಿ ಯಾವುದೇ ಪ್ರಾಮಾಣಿಕ ಪ್ರಯತ್ನ ಮಾಡದೇ ಇದ್ದ ಕಾರಣ ಪ್ರಕರಣಗಳು ಇನ್ನು ತನಿಖಾವಸ್ಥೆಯಲ್ಲಿ ಇರುತ್ತದೆ. ಈ ರೀತಿಯಾಗಿ ಇವರು ತಮ್ಮ ಕರ್ತವ್ಯದಲ್ಲಿ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣೆ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಭೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಇವರು ಮೇಲೆ ಕ್ರಮ ಸಂಖ್ಯೆ : 1) ರಲ್ಲಿ ಓದಲಾದ ದಿನಾಂಕ : 20–4–2005 ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮೂರು ವರ್ಷಗಳ ಕಾಲ ನಂತರದ ವಾರ್ಷಿಕ ವೇತನ ಬಡ್ತಿಗೆ ತೊಂದರೆಯಾಗದಂತೆ ಮುಂದೂಡಿದ ಶಿಕ್ಷೆ ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ 2) ರಲ್ಲಿ ಓದಲಾದ ದಿನಾಂಕ: 23–9–2005 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ದಿನಾಂಕ : 28–2–2008 ಕ್ಕೆ ವಯೋನಿವೃತ್ತಿ ಹೊಂದುತ್ತಿದ್ದು, ಶಿಕ್ಷಾ ಅವಧಿ ನಿವೃತ್ತಿ ನಂತರವೂ ಮುಂದುವರಿಯುತ್ತಿರುವುದರಿಂದ ಹಾಗೂ ಇವರ ಪಿಂಚಣಿ ನಿಗಧಿಪಡಿಸಲು ಸಾಧ್ಯವಾಗದ ಕಾರಣ ಇವರು 1971 ರಲ್ಲಿ ಪೊಲೀಸ್ ಪೇದೆಯಾಗಿ ಸೇವೆಗೆ ಸೇರಿದ್ದು, ಯಾವುದೇ ಗುರುತರ ಆರೋಪ ಮಾಡಿಲ್ಲವಾದ್ದರಿಂದ ಶಿಸ್ತು ಪ್ರಾಧಿಕಾರಿ ದಿನಾಂಕ : 20–4–2005 ರಂದು ಹೊರಡಿಸಿದ ಆದೇಶವನ್ನು ಭಾಗಶ: ಮಾರ್ಪಡಿಸಿ, 3 ವರ್ಷಗಳ ಬದಲಿಗೆ 2 ವರ್ಷಗಳ ಕಾಲದ ನಂತರ ವಾರ್ಷಿಕ ಬಡ್ತಿಗಳಿಗೆ ಯಾವುದೇ ತೊಂದರೆಯಾಗದಂತೆ ಮುಂದೂಡಿದ ಶಿಕ್ಷೆಯನ್ನು ವಿಧಿಸಬಹುದಾಗಿದೆ ಎಂದು ಸರ್ಕಾರವು ಉದ್ದೇಶಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ : 2–6–2007 ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತಮ್ಮ ಸಹಮತಿ ನೀಡಲಾಗಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/21/ಪೊಸಿಅ/2007, ಬೆಂಗಳೂರು, ದಿನಾಂಕ:4–7–07.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರುದ್ರಸ್ವಾಮಿ, ಪಿ.ಎಸ್.ಐ., ಮದ್ದೂರು ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

1) ಶಿಸ್ತು ಪ್ರಾಧಿಕಾರದ ಆದೇಶವನ್ನು ಭಾಗಶ: ಮಾರ್ಪಡಿಸಿ ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮೂರು ವರ್ಷಗಳ ಬದಲಿಗೆ 2 ವರ್ಷಗಳ ಕಾಲ ನಂತರ ವಾರ್ಷಿಕ ವೇತನ ಬಡ್ತಿಗಳಿಗೆ ಯಾವುದೇ ತೊಂದರೆಯಾಗದಂತೆ ಮುಂದೂಡಲು ಆದೇಶಿಸಿದೆ.

2) ಈ ಆದೇಶವು ಶಿಸ್ತು ಪ್ರಾಧಿಕಾರವು ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ : ಪಿ.ಎಸ್.ಸಿ/43/ಸಿ.ಎನ್.ಎಸ್/2007, ದಿನಾಂಕ : 2–6–2007 ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

ಪಿ.ಆರ್. 1324 (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಬಿ.ಬಿ.ಭಜಂತ್ರಿ, ಪಿ.ಎಸ್.ಐ., ಹನುಮಸಾಗರ ಪೊಲೀಸ್ ಠಾಣೆ ಇವರು ಸಲ್ಲಿಸಿರುವ ಮೇಲ್ಮನವಿ ಕುರಿತು.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ., ಕೊಪ್ಪಳ ಇವರ ಆದೇಶ ಸಂಖ್ಯೆ : ಶಿಕ್ಷೆ/58/2005, ಓ.ಬಿ. ಸಂಖ್ಯೆ : 639/2005, ದಿನಾಂಕ : 26-9-2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಐ.ಜಿ.ಪಿ., ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ : ಅಪೀಲು-4/ಈ.ವ/2005, ಆ.ಪು. ಸಂಖ್ಯೆ : 1/ಈ.ವ/2005/89, ದಿನಾಂಕ : 20-12-2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 28-8-2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)/129/2006-07, ದಿನಾಂಕ : 12-3-2007.
5) ಕಾರ್ಯದರ್ಶಿ, ಕೆ.ಪಿ.ಎಸ್.ಸಿ. ರವರ ಪತ್ರ ಸಂಖ್ಯೆ: ಪಿ.ಎಸ್.ಸಿ /30/ ಸಿ.ಎನ್.ಎಸ್/2007, ದಿನಾಂಕ: 15-6-2007.

**ಪ್ರಸ್ತಾವನೆ:**

ಶ್ರೀ ಬಿ.ಬಿ.ಭಜಂತ್ರಿ, ಪಿ.ಎಸ್.ಐ., ಹನುಮಸಾಗರ ಪೊಲೀಸ್ ಠಾಣೆ ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

ಆಪಾದಿತ ಪೊಲೀಸ್ ಅಧಿಕಾರಿ ರವರುಗಳು ಶಿಸ್ತಿನ ಇಲಾಖೆಯ ನೌಕರರಾಗಿರುವ ನೀವು ಈ ಹಿಂದೆ ರಾಯಚೂರ ಜಿಲ್ಲೆಯ ತುರ್ವಿಹಾಳ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ತುರ್ವಿಹಾಳ ಠಾಣೆ ಗುನ್ನೆ ಸಂಖ್ಯೆ : 62/05, ಕಲಂ 279, 337, 338 ಐಪಿಸಿ ಪ್ರಕರಣದಲ್ಲಿ ವಾಹನ ಸಂಖ್ಯೆ : ಕೆಎ-25, ಎಂ-7092 ನೇದ್ದನ್ನು ಜಪ್ತಿ ಮಾಡಿಕೊಂಡ ವಾಹನವನ್ನು ಮಾನ್ಯ ನ್ಯಾಯಾಲಯದ ಪರವಾನಿಗೆ ಪಡೆಯದೇ ವಾಹನವನ್ನು ಬಿಡುಗಡೆ ಮಾಡಿ ನೀವು ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಬೇಜವಾಬ್ದಾರಿತನ ಹಾಗೂ ಆದೇಶ ಉಲ್ಲಂಘನೆ ಮಾಡಿ ಕರ್ತವ್ಯ ಲೋಪದ ವರ್ತನೆಯನ್ನು ಪ್ರದರ್ಶಿಸಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಭೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಕೊಪ್ಪಳ ಇವರು ಮೇಲೆ ಕ್ರಮ ಸಂಖ್ಯೆ : 1) ರಲ್ಲಿ ಓದಲಾದ ದಿನಾಂಕ : 26-9-2007 ರ ಆದೇಶದಲ್ಲಿ ಅರ್ಜಿದಾರರಿಗೆ ವಾರ್ಷಿಕ ವೇತನ ಬಡ್ತಿಗಳ ಮೇಲೆ ಎರಡು ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ 2) ರಲ್ಲಿ ಓದಲಾದ ದಿನಾಂಕ: 20-12-2005 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರೀಕ್ಷೆ ಮುಗಿದ ಮೇಲೆ ವಾಹನದ ಮಾಲೀಕರಿಗೆ ಮೇಲಾಧಿಕಾರಿಗಳವರ ಸುತ್ತೋಲೆ ಮೇರೆಗೆ ಇಂದೇ ಮಿನಿಟ್ ಬಾಂಡ್ ಪಡೆದು ಬಿಡುಗಡೆ ಮಾಡಿರುವುದರಿಂದ ಯಾವುದೇ ರೀತಿಯ ಉಲ್ಲಂಘನೆಯಾಗಿರುವುದಿಲ್ಲವಾದ ಕಾರಣ ಶಿಸ್ತು ಪ್ರಾಧಿಕಾರ ವಿಧಿಸಿರುವ ಈ ದಂಡನೆಯನ್ನು ರದ್ದುಪಡಿಸಿ ಅವರ ವಾರ್ಷಿಕ ವೇತನ ಬಡ್ತಿಯನ್ನು ಸಕ್ರಮಗೊಳಿಸಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ: 23-6-2007 ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದ ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/83/ಮೊಸಿಅ/2007, ಬೆಂಗಳೂರು, ದಿನಾಂಕ:26-6-07.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ಬಿ.ಭಜಂತ್ರಿ, ಪಿ.ಎಸ್.ಐ.,

ಹನುಮಸಾಗರ ಪೊಲೀಸ್ ಠಾಣೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

೧) ಶಿಸ್ತು ಪ್ರಾಧಿಕಾರಿಯ ದಂಡನಾದೇಶವನ್ನು ರದ್ದುಪಡಿಸಿ, ವಾರ್ಷಿಕ ವೇತನ ಬಡ್ತಿಯನ್ನು ಸಕ್ರಮಗೊಳಿಸಿ ಬಿಡುಗಡೆ ಮಾಡಲು ಆದೇಶಿಸಿದೆ.

೨) ಈ ಆದೇಶವು ಶಿಸ್ತು ಪ್ರಾಧಿಕಾರವು ಹೊರಡಿಸಿದ ಆದೇಶ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ : ಪಿ.ಎಸ್.ಸಿ/30/ಸಿ.ಎನ್.ಎಸ್/2007, ದಿನಾಂಕ : 23–6–2007 ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

ಪಿ.ಆರ್. 1265 (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಜಯನಾಗ್ಯ ಸಿದ್ಧಿ, ಪಿಸಿ–283, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ರವರನ್ನು ಸೇವೆಯಲ್ಲಿ ಮರು ನೇಮಕ ಮಾಡಲು ಕೋರಿರುವ ಮನವಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರ ಆದೇಶ ಸಂಖ್ಯೆ : ಸಿಬ್ಬಂದಿ(1)/131/98–99, ದಿನಾಂಕ : 19–9–2000.

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಐ.ಜಿ.ಪಿ., ಕೆ.ಎಸ್.ಆರ್.ಪಿ., ಬೆಂಗಳೂರು ಇವರ ಆದೇಶ ಸಂಖ್ಯೆ : ಸಿಬ್ಬಂದಿ(1)/59/2000–01, ದಿನಾಂಕ : 18–10–2000.

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 9–3–2005.

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)/72/2005, ದಿನಾಂಕ : 14–7–2006.

**ಪ್ರಸ್ತಾವನೆ:**

ಶ್ರೀ.ಜಯನಾಗ್ಯ ಸಿದ್ಧಿ, ಪಿಸಿ–283, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977 ರ ನಿಯಮ 6(1) ರಡಿ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

ಅರ್ಜಿದಾರರು 1993 ರಲ್ಲಿ ಕರ್ತವ್ಯಕ್ಕೆ ಸೇರಿದ್ದು, ಕನ್ನಡ ಭಾಷೆಯನ್ನು ಪಾಸು ಮಾಡಿಲ್ಲವಾದ ಕಾರಣ ದಿನಾಂಕ: 19–9–2000 ರಲ್ಲಿ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977 ರ ನಿಯಮ 6(1)ರ ಪ್ರಕಾರ ದಿನಾಂಕ: 26–6–1998 ರಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಿದೆ.

ಮೇಲ್ಕಂಡ ಆರೋಪದ ಮೇಲೆ ವಿಚಾರಣೆ ನಡೆಸಿ, ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ : 1) ರಲ್ಲಿ ಓದಲಾದ ದಿನಾಂಕ : 19–9–2006 ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಿಮುಕ್ತಿಗೊಳಿಸಿದಂತೆ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ 2) ರಲ್ಲಿ ಓದಲಾದ ದಿನಾಂಕ : 18–10–2000 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ವಾದಾಂಶಗಳನ್ನೂ ಪರಿಶೀಲಿಸಲಾಗಿದೆ. ಅರ್ಜಿದಾರರು ಪರಿವೀಕ್ಷಣಾ ಅವಧಿಯಲ್ಲಿಯೇ ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆಯಾಗಿಲ್ಲದೆ ಇರುವುದು ಹಾಗೂ ಅನಧೀಕೃತವಾಗಿ 9 ತಿಂಗಳಿಗೂ ಮೇಲ್ಪಟ್ಟು, ಗೈರುಹಾಜರಾಗಿರುವುದು ಇವರ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒ.ಇ/138/ಪೊಸಿಅ/2007, ಬೆಂಗಳೂರು, ದಿನಾಂಕ: 21–6–2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977 ರ ನಿಯಮ 6(1) ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಯನಾಗ್ಯ ಸಿದ್ಧಿ, ಪಿಸಿ–283, 1ನೇ ಪಡೆ, ಕೆ.ಎಸ್.ಆರ್.ಪಿ., ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

ಪಿ.ಆರ್. 1264 (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ಸಿದ್ಧಲಿಂಗಸ್ವಾಮಿ, ಪ್ರಭಾರ ಆರ್.ಎಸ್.ಐ., ಸಿ.ಎ.ಆರ್. ಮತ್ತು ಪ್ರೇಮ್ ಕುಮಾರ್, ಸಿಪಿಸಿ–127, ಕೃಷ್ಣರಾಜ ಸಂಚಾರ ಠಾಣೆ, ಮೈಸೂರು ನಗರ ರವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಸಿ.ಓ.ಪಿ., ಮೈಸೂರು ಇವರ ಆದೇಶ ಸಂಖ್ಯೆ : ಇ.ವಿ/9/2001–02, ಓ.ಬಿ. ಸಂಖ್ಯೆ : 446/2003–04, ದಿನಾಂಕ : 31–10–2003.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು ಇವರ ಆದೇಶ ಸಂಖ್ಯೆ : ಅಪೀಲು/6/26/2003–04, ದಿನಾಂಕ : 30–7–2004.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: ________
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)/51/2005, ದಿನಾಂಕ : 21–6–2005.

**ಪ್ರಸ್ತಾವನೆ:**

ಶ್ರೀ ಎಸ್.ಸಿದ್ಧಲಿಂಗಸ್ವಾಮಿ, ಪ್ರಭಾರ ಆರ್.ಎಸ್.ಐ., ಸಿ.ಎ.ಆರ್. ಮತ್ತು ಪ್ರೇಮ್ ಕುಮಾರ್, ಸಿಪಿಸಿ–127, ಕೃಷ್ಣರಾಜ ಸಂಚಾರ ಠಾಣೆ, ಮೈಸೂರು ನಗರ ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

ಆಪಾದಿತ ಪೊಲೀಸ್ ಅಧಿಕಾರಿ ರವರುಗಳು ಶಿಸ್ತಿನ ಇಲಾಖೆಯ ನೌಕರರಾಗಿದ್ದು, ದಿನಾಂಕ: 1–1–2002 ರ ಸುಮಾರು 5 ಗಂಟೆ ಸಮಯದಲ್ಲಿ ಜ್ಯೋತಿನಗರ ಎ–ಬ್ಲಾಕ್, ಪೊಲೀಸ್ ವಸತಿ ಗೃಹ ಸಂಖ್ಯೆ : 107 ರಲ್ಲಿ ವಾಸವಾಗಿರುವ ಎಪಿಸಿ–40, ಶ್ರೀ ಎಂ.ಮಹದೇವಯ್ಯ, ಆತನ ಮಗ ಮಹೇಶ್ ಕುಮಾರ್ ಹಾಗೂ ಅವರ ಕುಟುಂಬದವರೊಂದಿಗೆ ತೀಟೆ ವ್ಯಾಜ್ಯ ತೆಗೆದು ಅವರುಗಳಿಗೆ ಮಚ್ಚು ಹಾಗೂ ರಿಪೀಸ್ ಪಟ್ಟಿಯಿಂದ ಹೊಡೆದು ಗಾಯಪಡಿಸುವುದರ ಮೂಲಕ ದುಂಡಾವರ್ತಿ ವರ್ತನೆ, ಅಶಿಸ್ತು ಹಾಗೂ ದುರ್ನಡತೆ ಪ್ರದರ್ಶಿಸಿರುವ ಬಗ್ಗೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಭೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಆಯುಕ್ತರು, ಮೈಸೂರು ಇವರು ಮೇಲೆ ಕ್ರಮ ಸಂಖ್ಯೆ : 1) ರಲ್ಲಿ ಓದಲಾದ ದಿನಾಂಕ : 31–10–2003 ರಲ್ಲಿ ಆದೇಶವನ್ನು ಈ ಕೆಳಕಂಡಂತೆ ಮಾಡಿರುತ್ತಾರೆ.

1) 1. ಶ್ರೀ ಸಿದ್ಧಲಿಂಗಸ್ವಾಮಿ, ಪ್ರಭಾರ ಆರ್.ಎಸ್.ಐ., ಸಿ.ಎ.ಆರ್., ಮೈಸೂರು ನಗರ ರವರ ವೇತನವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ 3850–7050 ಯಲ್ಲಿಯೂ, ಶ್ರೀ ಪ್ರೇಮ್ ಕುಮಾರ್, ಪಿಸಿ–127, ಕೆ.ಆರ್.ಸಂಚಾರ ಠಾಣೆ, ಮೈಸೂರು ನಗರ ರವರ ವೇತನವನ್ನು ರೂ. 3000–5450 ವೇತನ ಶ್ರೇಣಿಯಲ್ಲಿ ಕನಿಷ್ಠ ಮಟ್ಟಕ್ಕೆ ಇಳಿಸಲಾಗಿದೆ.
   2. ಈ ದಂಡನೆಯು ಮೂರು ವರ್ಷಗಳು ಜಾರಿಯಲ್ಲಿರುತ್ತದೆ.
   3. ದಂಡನೆಯ ಅವಧಿಯಲ್ಲಿ ವಾರ್ಷಿಕ ವೇತನ ಬಡ್ತಿಗಳಿಗೆ ಅವಕಾಶವಿಲ್ಲ.
   4. ದಂಡನೆಯು ಮುಂದಿನ ವೇತನ ಬಡ್ತಿಗಳಿಗೆ ಬಾಧಕವಾಗುವಂತಿರುತ್ತದೆ.
2) ಶ್ರೀ ಸಿದ್ಧಲಿಂಗಸ್ವಾಮಿ, ಪ್ರಭಾರ ಆರ್.ಎಸ್.ಐ. ರವರು ದಿನಾಂಕ : 1–1–2002 ರಿಂದ 15–5–2002 ರವರೆಗೆ ಮತ್ತು ಶ್ರೀ ಪ್ರೇಮ್ ಕುಮಾರ್, ಪಿಸಿ–127 ರವರು ದಿನಾಂಕ : 1–1–2002 ರಿಂದ 14–5–2002 ರವರೆಗೆ ಕಳೆದ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿ ಅಮಾನತ್ತಿನ ಅವಧಿಯಲ್ಲಿ ನೀಡಲಾದ ಜೀವನಾಂಶ ಭತ್ಯೆಗಳಿಗೆ ಸೀಮಿತಗೊಳಿಸಿರುತ್ತೇನೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ 2) ರಲ್ಲಿ ಓದಲಾದ ದಿನಾಂಕ : 30–7–2004 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರುಗಳ ದುಷ್ಕೃತ್ಯ ಇಲಾಖಾ ವಿಚಾರಣೆಯಲ್ಲಿ ನಿಸ್ಸಂದೇಹವಾಹ ಸಾಬೀತಾಗಿರುವುದರಿಂದ ಹಾಗೂ ಈ ಇಬ್ಬರು ಪೊಲೀಸ್ ಇಲಾಖೆಯ ಜವಾಬ್ದಾರಿಯುತ ಅಧಿಕಾರಿ / ಪೇದೆಯಾಗಿದ್ದು ಇವರು ಎಸಗಿರುವ ಕೃತ್ಯಕ್ಕೆ ಕ್ಷಮೆ ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/102/ಪೊಸಿಅ/2007, ಬೆಂಗಳೂರು, ದಿನಾಂಕ:21–6–07.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಸಿದ್ಧಲಿಂಗಸ್ವಾಮಿ, ಪ್ರಭಾರ ಆರ್.ಎಸ್.ಐ., ಸಿ.ಎ.ಆರ್. ಮತ್ತು ಪ್ರೇಮ್ ಕುಮಾರ್, ಸಿಪಿಸಿ–127, ಕೃಷ್ಣರಾಜ ಸಂಚಾರ ಠಾಣೆ, ಮೈಸೂರು ನಗರ ಇವರುಗಳು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

ಪಿ.ಆರ್. 1263 (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಸಿ.ಎಸ್.ಬೆನ್ನೂರ್, ಪಿ.ಐ., ಸಿ.ಓ.ಡಿ., ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಐ.ಜಿ.ಪಿ., ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ : ಇ.ವಿ/8/ಈ.ವ/2004–05, ಓ.ಬಿ. ಸಂಖ್ಯೆ : 432/ಈ.ವ/2005/4418, ದಿ: 20–10–2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು ಇವರ ಆದೇಶ ಸಂಖ್ಯೆ : ಸಿಬಿ(8)22/99–2000, ದಿನಾಂಕ : 29–4–2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 31–5–2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ:ಸಿಬಿ–8/22/99–2000, ದಿನಾಂಕ : 9–5–2006.

**ಪ್ರಸ್ತಾವನೆ:**

ಶ್ರೀ ಸಿ.ಎಸ್.ಬೆನ್ನೂರ್, ಪಿ.ಐ., ಸಿ.ಓ.ಡಿ., ಬೆಂಗಳೂರು ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

ನೀವು 1991 ನೇ ಇಸವಿಯಲ್ಲಿ ದಾವಣಗೆರೆ ಬಡಾವಣೆ ಠಾಣೆಯಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್ ಆಗಿ ಕೆಲಸ ಮಾಡುತ್ತಿದ್ದಾಗ, 16–10–1991 ರಂದು ದಾವಣಗೆರೆ ಬಡಾವಣೆಯ ಎಂ.ಸಿ.ಸಿ., ಬಿ–ಬ್ಲಾಕ್‌ನಲ್ಲಿ ಇರತಕ್ಕ ಡಾ//ಸೋಮಶೇಖರ ಅವರ ಹೆಂಡತಿ ಡಾ//ಮಂಜುಳಾ ಇವರು ಮೃತಪಟ್ಟಿದ್ದು, ಆ ಕಾಲಕ್ಕೆ ದಾವಣಗೆರೆ ಡಿ.ಎಸ್.ಪಿ. ಮತ್ತು ಎಸ್.ಪಿ., ಚಿತ್ರದುರ್ಗ ಇವರು ಘಟನಾ ಸ್ಥಳಕ್ಕೆ ಭೇಟಿ ಕೊಟ್ಟು, ಸದರಿ ಮೃತ ಮಂಜುಳಾ ಇವರ ಮರಣದ ಬಗ್ಗೆ ಕೇಸು ದಾಖಲು ಮಾಡಿಕೊಂಡು ತನಿಖೆ ವಹಿಸಿಕೊಳ್ಳಲು ನಿಮಗೆ ಪೊಲೀಸ್ ಅಧೀಕ್ಷಕರು, ಚಿತ್ರದುರ್ಗ ಇವರು ಆದೇಶ ಮಾಡಿದ್ದರೂ ಸಹಿತ ನೀವು ಅದೇ ದಿವಸ ಗುನ್ನೆ ದಾಖಲು ಮಾಡಿಕೊಳ್ಳದೇ ದಿನಾಂಕ : 17–10–1991 ರಂದು ಗುನ್ನೆ ಸಂಖ್ಯೆ : 383/91, ಕಲಂ : 498(ಎ)ಭಾ.ದಂ.ಸಂ. ಪ್ರಕಾರ ಕೇಸು ದಾಖಲು ಮಾಡಿ, ಸರಿಯಾದ ಕಲಂ : 304(ಬಿ) ಹಚ್ಚದೆ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತನ ಹಾಗೂ ಉದಾಸೀನತೆ ತೋರಿಸಿದ್ದು ಇದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ : 1) ರಲ್ಲಿ ಓದಲಾದ ದಿನಾಂಕ : 29-4-2006 ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಪೂರ್ವಾನ್ವಯವಾಗಿ 3 ವರ್ಷಗಳ ಕಾಲ ಮುಂದೂಡಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ಇವರು ಶಿಸ್ತು ಪ್ರಾಧಿಕಾರರು ಹೊರಡಿಸಿರುವ ಆದೇಶವು ನೈಸರ್ಗಿಕ ನಿಯಮಗಳಿಗೆ ವಿರುದ್ಧವಾಗಿರುವುದರಿಂದ, ಶಿಸ್ತು ಪ್ರಾಧಿಕಾರರ ಆದೇಶವನ್ನು ಮಾರ್ಪಡಿಸಿ, ಈ ಕೆಳಕಂಡಂತೆ ಆದೇಶಿಸಿರುತ್ತಾರೆ.

**ಶ್ರೀ ಸಿ.ಎಸ್.ಬೆನ್ನೂರ್, ಪಿ.ಐ. ರವರ ವಾರ್ಷಿಕ ವೇತನ ಬಡ್ತಿಯ ದಿ: 1-4-2006 ರಿಂದಲೇ ಜಾರಿಗೆ ಬರುವಂತೆ, ಅವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮುಂದೂಡಲಾಗಿದೆ.**

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ನಿಸ್ಸಂಶಯವಾಗಿ ಆರೋಪ ಸಾಬೀತಾಗಿರುವುದರಿಂದ ಪರಿಷ್ಕರಣಾ ಮೇಲ್ಮನವಿಯಲ್ಲಿ ಯಾವುದೇ ಹೊಸ ಅಂಶಗಳು ಇಲ್ಲದೇ ಇರುವುದರಿಂದ ಮೇಲ್ಮನವಿ ಪ್ರಾಧಿಕಾರವು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒ.ಇ/253/ಪೊಸಿಅ/2006, ಬೆಂಗಳೂರು, ದಿನಾಂಕ: 21-6-2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಎಸ್.ಬೆನ್ನೂರ್, ಪಿ.ಐ., ಸಿ.ಓ.ಡಿ., ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

ಪಿ.ಆರ್. 1262 (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ಎಂ.ಮುನಿರಾಜು, ಪಿಸಿ-2004, ಹಲಸೂರು ಪೊಲೀಸ್ ಠಾಣೆ, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಪೂರ್ವ ವಿಭಾಗ, ಬೆಂಗಳೂರು ಇವರ ಆದೇಶ ಸಂಖ್ಯೆ : ಡಿ.ಇ/ಆರ್-6/09/ಪೂ/2003, ದಿನಾಂಕ : 3-3-2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ (ಆಡಳಿತ), ಬೆಂಗಳೂರು ಇವರ ಆದೇಶ ಸಂಖ್ಯೆ : 9/ಅಪೀಲು/2005, ದಿ : 8-12-2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 10-4-2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)/59/2006-07, ದಿನಾಂಕ : 26-9-2006.

**ಪ್ರಸ್ತಾವನೆ:**

ಶ್ರೀ ಎಸ್.ಎಂ.ಮುನಿರಾಜು, ಪಿಸಿ-2004, ಹಲಸೂರು ಪೊಲೀಸ್ ಠಾಣೆ, ಬೆಂಗಳೂರು ನಗರ ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

ಆಪಾದಿತ ಪೊಲೀಸ್ ಅಧಿಕಾರಿ ರವರುಗಳು ಶಿಸ್ತಿನ ಇಲಾಖೆಯ ನೌಕರರಾಗಿರುವ ಪಿ.ಸಿ.-2004, ಮುನಿರಾಜು, ಹಲಸೂರು ಪೊಲೀಸ್ ಠಾಣೆ ಆದ ನೀವು ದಿನಾಂಕ : 15-2-2003 ರಿಂದ 1-7-2003 ರವರೆಗೆ ಠಾಣೆಗೆ ಯಾವುದೇ ಮುನ್ಸೂಚನೆ ನೀಡದೇ ಮೇಲಾಧಿಕಾರಿಗಳಿಂದ ರಜೆ ಮಂಜೂರು ಮಾಡಿಸಿಕೊಳ್ಳದೇ ಹಾಗೂ ಎಂ.ಹೆಚ್.ಎಸ್. ಪುಸ್ತಕವನ್ನು ಸಹ ತೆಗೆದುಕೊಳ್ಳದೇ ಕೆಲಸಕ್ಕೆ ಅನಧೀಕೃತವಾಗಿ ಗೈರುಹಾಜರಾಗಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಭೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಪೂರ್ವ ವಿಭಾಗ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ : 1) ರಲ್ಲಿ ಓದಲಾದ ದಿನಾಂಕ:3–3–2005 ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಲಾಗಿದೆ ಹಾಗೂ ದಿನಾಂಕ: 15–2–2003 ರಿಂದ 1–7–2003 ರವರೆಗೆ ಸಂಬಳ ರಹಿತ ರಜೆ ಎಂದು ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ (ಆಡಳಿತ), ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ 2) ರಲ್ಲಿ ಓದಲಾದ ದಿನಾಂಕ : 8–12–2005 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣಾ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಿಂದ ಅನಧಿಕೃತವಾಗಿ ಗೈರುಹಾಜರಾಗಿರುವುದು ಸಾಬೀತಾಗಿರುತ್ತದೆ ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ/18/ ಸೇಇವಿ/2001, ದಿನಾಂಕ : 14–9–2001 ರ ಪ್ರಕಾರ 4 ತಿಂಗಳಿಗಿಂತ ಮೇಲ್ಪಟ್ಟ ಗೈರುಹಾಜರಾದರೆ ಸೇವೆಯಿಂದ ತೆಗೆದುಹಾಕುವ ಶಿಕ್ಷೆ ವಿಧಿಸಲು ಸೂಚಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒ.ಇ/128/ಪೊಸಿಅ/2007, ಬೆಂಗಳೂರು, ದಿನಾಂಕ:21–6–07.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಎಂ.ಮುನಿರಾಜು, ಪಿಸಿ–2004, ಹಲಸೂರು ಪೊಲೀಸ್ ಠಾಣೆ, ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು)

ಪಿ.ಆರ್. 1261

**ವಿಷಯ:** ಶ್ರೀ ಎಂ.ರಾಮಪ್ಪ, ಸಿ.ಹೆಚ್.ಸಿ.–4, ಹೊಸಪೇಟೆ ಪಟ್ಟಣ ಠಾಣೆ, ಬಳ್ಳಾರಿ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಎಸ್.ಪಿ., ಬಳ್ಳಾರಿ ಇವರ ಆದೇಶ ಸಂಖ್ಯೆ : 16/ಇ.ವಿ/2003, ಜಿ.ಆ. ಸಂಖ್ಯೆ : 182/2005–06, ದಿನಾಂಕ : 23–6–2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಐ.ಜಿ.ಪಿ., ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ : 28/ಅಪೀಲು/ಸಿಬ್ಬಂದಿ–2/2005–06, ಒ.ಬಿ. ಸಂಖ್ಯೆ : 166/2005–06, ದಿನಾಂಕ : 15–11–2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 3–3–2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಅಪೀಲು(2)/48/2006, ದಿನಾಂಕ : 7–8–2006.

**ಪ್ರಸ್ತಾವನೆ:**

ಶ್ರೀ ಎಂ.ರಾಮಪ್ಪ, ಸಿ.ಹೆಚ್.ಸಿ.–4, ಹೊಸಪೇಟೆ ಪಟ್ಟಣ ಠಾಣೆ, ಬಳ್ಳಾರಿ ಜಿಲ್ಲೆ ಇವರ ವಿರುದ್ಧ (ಇ.ಮು.ಅ.ಕ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

1) ನೀವು ದಿನಾಂಕ : 30–7–2003 ರಂದು ಬೆಳಿಗ್ಗೆ 8–00 ಗಂಟೆಗೆ ಶ್ರೀ.ಖಾಜಾ ಹುಸೇನ್, ತಂದೆ ಲೇಟ್ ಮಹಮದ್ ಇಸಾಕ್, 33 ವರ್ಷ, ಜಿಂದಾಲ್‌ನಲ್ಲಿ ಕಂಟ್ರಾಕ್ಟರ್ ಕೆಲಸ, ವಾಸ: ಎಕ್ಸ್ ಸರ್ವೀಸ್ ಮ್ಯಾನ್ ಕಾಲೋನಿ, ಕೌಲ್

ಬಜಾರ್, ಬಳ್ಳಾರಿ ರವರ ಮನೆ ಹತ್ತಿರ ಹೋಗಿ ಅವರಿಗೆ ನೀನು ಮಟ್ಕಾ ದಂಧೆ ನಡೆಸುತ್ತಿದ್ದೀಯ ರೂ. 2,000–00 ಕೊಡು ಅಂತ ಕೇಳಿದ್ದು, ಅದಕ್ಕೆ ಅವರು ಒಪ್ಪದೇ ಇದ್ದುದರಿಂದ ನಾಳೆ ಮಧ್ಯಾಹ್ನ ಒಳಗಾಗಿ ಒಂದು ಗತಿ ಕಾಣಿಸುತ್ತೇನೆಂದು, ಅದು ಕೂಡ ನಮ್ಮ ಪೊಲೀಸರಿಂದಲ್ಲ ಬೇರೆಯವರ ಕಡೆಯಿಂದ ಮಾಡಿಸುತ್ತೇನೆಂದು ಬೆದರಿಕೆ ಹಾಕಿ ಹೋಗಿರುತ್ತೀರೆಂದು ಮತ್ತು ಅದೇ ದಿನ ಸಂಜೆ 6–00 ಗಂಟೆಗೆ ಗಾಜುಲ ಶೀನ ಮಟ್ಕಾ ಬುಕ್ಕಿ ಹತ್ತಿರ ಹೋಗಿ ನೀನು ಮಟ್ಕಾ ದಂಧೆ ನಡೆಸುತ್ತೀ ಎಂದು ಖಾಜಾ ಹುಸೇನ್‌ನನ್ನು ನನಗೆ ಹೇಳಿರುತ್ತಾನೆಂದು ಕೇಸು ಹಾಕುವುದಾಗಿ ಹೆದರಿಸಿ, ರೂ. 1,10,000–00 ಗಳನ್ನು ತೆಗೆದುಕೊಂಡು ಹೋಗಿರುತ್ತೀರೆಂದು, ಇದರಿಂದ ನಿನ್ನ ಮೇಲೆ ಸಿಟ್ಟು ಬಂದು ಹೊಡೆಯಲು ಹುಡುಕಾಡಿದರೂ ಸಿಕ್ಕಿರುವುದಿಲ್ಲ ಅಂತಾ.

2) ದಿನಾಂಕ : 31–7–2003 ರಂದು ಮಧ್ಯಾಹ್ನ 1–00 ಗಂಟೆಗೆ ಬಳ್ಳಾರಿಯ ಪೋಲಾ ಪ್ಯಾರಾಡೈಸ್ ಹೋಟೆಲ್‌ನಲ್ಲಿ ಗಾಜುಲ ಶೀನಾ ಮತ್ತು ಇತರೆ 6 ಜನರು ಸೇರಿ ಶ್ರೀ ಟಿ.ಖಾಜಾ ಹುಸೇನ್ ತಂದೆ ಲೇಟ್ ಮಹಮದ್ ಇಸಾಕ್ ಅವರಿಗೆ ಹೊಡೆ ಬಡೆ ಮಾಡಿ, ರಕ್ತಗಾಯ ಪಡಿಸಿ ಪ್ರಾಣ ಬೆದರಿಕೆ ಹಾಕಿದ್ದು, ಸದರಿ ಆರೋಪಿಗಳಿಗೆ ಕುಮ್ಮಕ್ಕು ನೀಡಿ, ಮಟ್ಕಾ ಬುಕ್ಕಿ ಅಜೀಜ್‌ನೊಂದಿಗೆ ಶಾಮೀಲಾಗಿದ್ದು, ಈ ಕುರಿತು ಕೌಲ್ ಬಜಾರ್ ಪೊಲೀಸ್ ಠಾಣೆಯಲ್ಲಿ ಗುನ್ನೆ ದಾಖಲಾಗಿದ್ದು, ಗುನ್ನೆ ಸಂಖ್ಯೆ : 160/2003, ಕಲಂ : 143, 147, 148, 323, 324, 355, 109, 307, 504, 506(2), ಆಧಾರ 149 ಐ.ಪಿ.ಸಿ. ಪ್ರಕಾರ ನಿಮ್ಮ ವಿರುದ್ಧ ಗುನ್ನೆ ದಾಖಲಾಗಿರುತ್ತದೆ. ನೀವು ಶಿಸ್ತಿನ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿದ್ದು, ಇಲಾಖೆಯ ಘನತೆಗೆ ಕುಂದು ತಂದಿರುವುದಲ್ಲದೇ ತೀವ್ರ ದುರ್ನಡತೆ ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ವಿಚಾರಣೆ ನಡೆಸಿ, ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಳ್ಳಾರಿ ಇವರು ಮೇಲೆ ಕ್ರಮ ಸಂಖ್ಯೆ : 1) ರಲ್ಲಿ ಓದಲಾದ ದಿನಾಂಕ: 23–6–2005 ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ಪರಿಣಾಮ ಬೀರುವಂತೆ ತಡೆಹಿಡಿಯಲಾಗಿದೆ ಹಾಗೂ ಇವರ ಅಮಾನತ್ತಿನ ಅವಧಿ ದಿನಾಂಕ : 1–8–2003 ರಿಂದ 20–10–2003 ರವರೆಗಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿದ ಶಿಕ್ಷೆ ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ 2) ರಲ್ಲಿ ಓದಲಾದ ದಿ: 15–11–2005 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಇವರ ಮೇಲಿನ ಆರೋಪವು ಗಂಭೀರ ಸ್ವರೂಪದ್ದಾಗಿರುತ್ತದೆ ಹಾಗೂ ಇವರು ಸಲ್ಲಿಸಿರುವ ಮೇಲ್ಮನವಿಯಲ್ಲಿನ ವಿವರಗಳನ್ನು ಪರಿಗಣಿಸಲು ಯಾವುದೇ ರೀತಿಯಲ್ಲಿ ಸಮರ್ಥನೀಯ ಕಾರಣಗಳು ಹಾಗೂ ದಾಖಲೆಗಳು ಇರುವುದಿಲ್ಲ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒ.ಇ/450/ಪೊಸಿಅ/2006, ಬೆಂಗಳೂರು, ದಿನಾಂಕ: 22–6–2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಎಂ.ರಾಮಪ್ಪ, ಸಿ.ಹೆಚ್.ಸಿ.–4, ಹೊಸಪೇಟೆ ಪಟ್ಟಣ ಠಾಣೆ, ಬಳ್ಳಾರಿ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

ಪಿ.ಆರ್. 1260 (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ವಿ.ಎಸ್.ಕೇಶವಮೂರ್ತಿ, ಹೆಚ್.ಸಿ.–524 ಕೇಂದ್ರ ಕಾರಾಗೃಹ ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು ಸಿ.ಎ.ಆರ್. ಕೇಂದ್ರ ಬೆಂಗಳೂರು ಇವರ ಆದೇಶ ಸಂಖ್ಯೆ:ಶಿಕ್ಷೆ:120–2003–04 ದಿನಾಂಕ:05/8–04–2004

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ ಆಡಳಿತ ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:27/ಅಪೀಲು/2004 ದಿನಾಂಕ:12-08-2005
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:28-12-2005
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)25/2006 ದಿನಾಂಕ:19-06-2007
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 192 ಸಿಎನ್‌ಎಸ್ 2006 ದಿನಾಂಕ:21-08-2007

**ಪ್ರಸ್ತಾವನೆ:**

ಶ್ರೀ ವಿ.ಎಸ್.ಕೇಶವಮೂರ್ತಿ, ಹೆಚ್.ಸಿ.-524 ಕೇಂದ್ರ ಕಾರಾಗೃಹ ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7ರಡಿ ದೋಷಾರೋಪಣ ಪತ್ರ ಹೊರಡಿಸಲಾಗಿದೆ.

**ದೋಷಾರೋಪಣೆ:**

ದಿ:11-07-2003ರಂದು ನ್ಯಾಯಾಲಯದ ಆವರಣದಿಂದ ಆರೋಪಿ 6617, ಟಿಪ್ಪು ಎಂಬ ಖೈದಿ ಪೊಲೀಸ್ ಬೆಂಗಾವಲಿನಿಂದ ಪರಾರಿಯಾಗಲು ಯತ್ನಿಸಿದ್ದು, ಅಂದಿನ ಬೆಂಗಾವಲು ಪೊಲೀಸ್ ಉಸ್ತುವಾರಿ ವಹಿಸಿದ್ದ ನೀವು, ಅವನನ್ನು ಹಿಡಿದಿರುವ ಬಗ್ಗೆ ಸಂಬಂಧ ಪಟ್ಟ ಪೊಲೀಸ್ ಠಾಣೆಗೆ ದೂರನ್ನು ನೀಡದೆ ಕರ್ತವ್ಯಲೋಪ ನಿರ್ಲಕ್ಷತೆ ಹಾಗೂ ಉದಾಸೀನತೆಯನ್ನು ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು ಸಿ.ಎ.ಆರ್. ಕೇಂದ್ರ ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:05/8-04-2004ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು, ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್ ಆಡಳಿತ ಬೆಂಗಳೂರು ನಗರ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:22-08-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಅರ್ಜಿದಾರರ ಪರಿಷ್ಕರಣ ಮೇಲ್ಮನವಿಯನ್ನು ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಹಾಗೂ ಇತರ ಸಿಬ್ಬಂದಿ, ಈ ಖೈದಿ ಸಪ್ಪಿಸಿಕೊಳ್ಳುವ [ಪರಾರಿ ಯತ್ನವನ್ನು] ಪ್ರಯತ್ನವನ್ನು ವಿಫಲಗೊಳಿಸಿ ಅದೇ ದಿನ ಈ ವಿಚಾರವನ್ನು ತಮ್ಮ ಮೇಲಿನ ಅಧಿಕಾರಿ ವರ್ಗದವರಿಗೆ ಮೌಖಿಕವಾಗಿ ಹಾಗೂ ಲಿಖಿತವಾಗಿ ತಿಳಿಸಿದರೂ, ಶಿಸ್ತು ಪ್ರಾಧಿಕಾರಿ ಅದನ್ನು ಪರಿಗಣಿಸದಿರುವುದು ಕಂಡು ಬರುತ್ತದೆ. ಖೈದಿಯನ್ನು ಪರಾರಿಯಾಗಲು ಬಿಡದೆ, ಸುರಕ್ಷಿತವಾಗಿ ಕಾರಾಗೃಹಕ್ಕೆ ತಂದು ಒಪ್ಪಿಸಿದ್ದರೂ, ಯಾವುದೇ ಅನಾಹುತ ಸಂಭವಿಸದಿದ್ದರೂ, ಶಿಸ್ತು ಪ್ರಾಧಿಕಾರಿ ದಂಡನೆ ವಿಧಿಸಿರುವುದನ್ನು ರದ್ದುಪಡಿಸಿ, ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಸಕ್ರಮಗೊಳಿಸಲು ಸರ್ಕಾರವು ಉದ್ದೇಶಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿ:21-08-2007ರ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿ ನೀಡಿದೆ. ಅದರಂತೆ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 283 ಪೊಸಿಅ 2007 ಬೆಂಗಳೂರು, ದಿನಾಂಕ:18-09-2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿ.ಎಸ್.ಕೇಶವಮೂರ್ತಿ, ಹೆಚ್.ಸಿ.-524 ಕೇಂದ್ರ ಕಾರಾಗೃಹ ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

1. ಶಿಸ್ತು ಪ್ರಾಧಿಕಾರಿಯು ದಂಡನಾದೇಶವನ್ನು ರದ್ದುಪಡಿಸಿ ವಾರ್ಷಿಕ ವೇತನ ಬಡ್ತಿಯನ್ನು ಸಕ್ರಮಗೊಳಿಸಿ ಬಿಡುಗಡೆ ಮಾಡಲು ಆದೇಶಿಸಿದೆ.
2. ಈ ಆದೇಶವು ಶಿಸ್ತು ಪ್ರಾಧಿಕಾರವು ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರಸಂಖ್ಯೆ PSC/192 CNS 06 ದಿ:21/08/2007ರಲ್ಲಿ ನೀಡಿದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಪೊಲೀಸ್ ಸೇವೆಗಳು)

ಪಿ.ಆರ್. 1735

**ವಿಷಯ:** ಶ್ರೀ ಸುಧಾಮ ಬಿ ನಾಯಕ್, ಪಿ.ಐ., ಜೋಯಿಡಾ ಪೊಲೀಸ್ ಠಾಣೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ:ಡಿಇ/45/ಉವ/2005 ದಿನಾಂಕ:14-09-2006

2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:08-01-2007

3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ(8)10/2007 ದಿನಾಂಕ:02-06-2007

**ಪ್ರಸ್ತಾವನೆ:**

ಶ್ರೀ.ಸುಧಾಮ ಬಿ ನಾಯಕ್, ಪಿ.ಐ., ಜೋಯಿಡಾ ಪೊಲೀಸ್ ಠಾಣೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 & 8ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:-**

1. ಆಪಾದಿತ ಪೊಲೀಸ್ ಅಧಿಕಾರಿ ಶ್ರೀ ಸುಧಾಮ ಬಿ ನಾಯಕ್, ಸಿಎಲ್ಐ, ಪೊಲೀಸ್ ತರಬೇತಿ ಶಾಲೆ, ಖಾನಾಪೂರ, ರವರಾದ ನೀವು ಈ ಹಿಂದೆ ಖಾನಾಪೂರ ವೃತ್ತದಲ್ಲಿ ಸಿಪಿಐ ಅಂತಾ ಕರ್ತವ್ಯ ನಿರ್ವಹಿಸುತ್ತಿದ್ದಾಗ ಲೊಂಡಾದ ಘಂಟಾ ಗಲ್ಲಿಯಲ್ಲಿ (ಗಾಂಧಿ) ನಗರದಲ್ಲಿ ಅಪೊಅ-2 ರವರು ದಿನಾಂಕ:**03-11-2005** ರಂದು ಮಾಮೂಲು ಹಣ ತೆಗೆದುಕೊಂಡು ನಿಮಗೆ ತಿಳಿಸದೇ ಜೂಜಾಟ ಆಡಿಸುತ್ತಿದ್ದರು ಎಂದು ಅವರೆಲ್ಲ ಸಾರಾಯಿ ಅಮಲಿನಲ್ಲಿರುತ್ತಾರೆ ಘಂಟಾ ಗಲ್ಲಿಯಲ್ಲಿ ಹೆಚ್ಚಾಗಿ ಗುನ್ನೆಗಾರರು ಸಮಾಜಘಾತುಕ ಚಟುವಟಿಕೆಯುಳ್ಳವರು ಇರುತ್ತಾರೆಂದು ಗೊತ್ತಿದ್ದರೂ ದಿ:**03-11-2005** ರಂದು ರಾತ್ರಿ ವೇಳೆಯಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಜನರು ಜುಗಾರ ಆಟವನ್ನು ಆಡುತ್ತಿದ್ದದ್ದು ಪ್ರತ್ಯಕ್ಷವಾಗಿ ನೋಡಿಯೂ ಸಹ ದಾಳಿ ಮಾಡಲು ಸಮರ್ಪಕ ಹೆಚ್ಚಿನ ಸಿಬ್ಬಂದಿಯವರನ್ನು ತೆಗೆದುಕೊಳ್ಳದೇ ನೀವು ಇಬ್ಬರು ಪಿಸಿ ಸಿಬ್ಬಂದಿಯವರೊಂದಿಗೆ ಹೋಗಿ ದಾಳಿ ಮಾಡಿ ನಿಮ್ಮ ಹಾಗೂ ಸಿಬ್ಬಂದಿಯವರ ಜೀವವನ್ನು ಅಪಾಯಕ್ಕೆ ಒಡ್ಡಿ ಹೊಣೆಗಾರಿಕೆ ಇಲ್ಲದೆ ನಿಮ್ಮ ಕರ್ತವ್ಯದಲ್ಲಿ ನಿರ್ಲಕ್ಷತನ ತೋರ್ಪಡಿಸಿರುವಿರಿ.

2. ದಾಳಿಯ ವೇಳೆಯಲ್ಲಿ ಜೂಜಾಡುತ್ತಿದ್ದವರಿಗೆ ಹಿಡಿದುಕೊಂಡು ಕಾನೂನಿನ ಅಡಿ ಕಾನೂನು ಕ್ರಮ ಕೈಗೊಳ್ಳದೆ ನಿಮ್ಮ ಕೈಯಲ್ಲಿ ಸಿಕ್ಕ ಜನರಿಗೆ ಸಿಕ್ಕಾಪಟ್ಟೆ ಹೊಡಿ ಬಡಿ ಮಾಡಿ ಪ್ಲಾಸ್ಟಿಕ ಚೇನಿಂದ ಒಬ್ಬನಿಗೆ ಹೊಡೆದು ಸಹನೆಯಿಲ್ಲದೆ ಅಸಭ್ಯ ರೀತಿಯಿಂದ ವರ್ತಿಸಿದ್ದರಿಂದ ಜೂಜಾಡುವವರು ಪ್ರಚೋದನೆಗೊಂಡು ಪೊಲೀಸರ ಮೇಲೆ ತಿರುಗಿ ಬಿದ್ದು ಹೊಡಿ ಬಡಿ ಮಾಡಿದ್ದರಿಂದ ಅಪೊಅ-4 ರವರ ತಲೆಗೆ ಪೆಟ್ಟು ಬಿದ್ದು ಗಾಯವಾಗಿದ್ದು ಅಲ್ಲದೆ, ಜೀಪಿಗೂ ಸಹ ಕಲ್ಲು ಒಗೆದು ಸರ್ಕಾರಿ ವಾಹನಕ್ಕೆ ಹಾನಿ ಮಾಡಿದ್ದು ನೀವು ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿ ನಿಮ್ಮ ಕರ್ತವ್ಯ ನಿರ್ವಹಿಸುವಲ್ಲಿ ಕಾನೂನು ಬಾಹೀರವಾಗಿ ದುರ್ನಡತೆ, ಅಸಭ್ಯ ವರ್ತನೆ, ಬೇಜವಾಬ್ದಾರಿತನವನ್ನು ತೋರ್ಪಡಿಸಿರುವಿರಿ.

3. ನಿಮ್ಮ ಹತ್ತಿರ ವಾಯರಲೆಸ್ ಸಂಪರ್ಕವಿದ್ದು ಲೊಂಡಾದಲ್ಲಿ ಫೋನ ಇದ್ದರೂ ಸದರಿ ಘಟನೆಯು ರಾತ್ರಿ 1 ಗಂಟೆಗೆ ನಡೆದರೂ ಬೆಳಗಿನವರೆಗೆ ತಮ್ಮ ಮೇಲಾಧಿಕಾರಿಗಳಿಗೆ ಯಾವುದೇ ತಿಳಿಸದೆ, ಅಪರಾಧಿಗಳ ಮೇಲೆ ಕೂಡಲೇ ಯಾವುದೆ ಸೂಕ್ತ ಕಾನೂನಿನನ್ವಯ ಕ್ರಮ ಕೈಗೊಳ್ಳದೆ ಯಾವುದೇ ಪ್ರಕರಣ ದಾಖಲಿಸದೇ ಬೆಳಗಿನವರೆಗೆ ಸುಮ್ಮನೆ ಉಳಿದು ಅದನ್ನು ಮುಚ್ಚಿ ಹಾಕಲು ಜೂಜಾಡುವವರ ಕಡೆಯಿಂದ ರೂ.**75,000-00**ಗಳ ಕರಾರು ಮಾಡಿ ಆ ಪೈಕಿ ರೂ.**14,000-00** ಹಣ ಮುಂಗಡ ಕಂತಾಗಿ ಪಡೆದುಕೊಂಡು ಈ ವಿಷಯದ ಬಗ್ಗೆ ದಿನಪತ್ರಿಕೆಗಳಲ್ಲಿ ಸುದ್ದಿ ಬಂದ ಮೇಲೆ ಮೇಲಾಧಿಕಾರಿಗಳ ಆದೇಶ ನೀಡಿದ ನಂತರ ಅಪರಾಧ ಸಂ.**229/05** ವಿದಿ **143, 147, 148, 324, 332, 353, 427,** ಜೊ.**149** ಭಾದಂಸ ರಡಿಯಲ್ಲಿ

ಪ್ರಕರಣವನ್ನು ದಾಖಲಿಸಿಕೊಂಡಿರುತ್ತೀರಿ. ಆದರೆ ಇದರಲ್ಲಿ ಪೊಲೀಸ್ ಕೊಲೆ ಮಾಡಲು ಪ್ರಯತ್ನಪಟ್ಟ ಬಗ್ಗೆಯಾಗಲಿ ಸರ್ಕಾರಿ ಆಸ್ತಿ ಹಾನಿಗೊಳಪಡಿಸಿದ ಬಗ್ಗೆಯಾಗಲಿ ಡಿ.ಪಿ.ಆಕ್ಟ್ ಅಡಿಯಲ್ಲಿ ಪ್ರಕರಣ ದಾಖಲಿಸಿದೇ ಹಾಗೂ ದುಖಾಪತಿಗಳನ್ನು ತಕ್ಷಣ ಉಪಚಾರಕ್ಕಾಗಿ ಕಳುಹಿಸಿಕೊಡದೆ ಬೆಳಗಿನವರೆಗೆ ಹಾಗೆ ಬಿಟ್ಟು ನಿಮ್ಮ ಕರ್ತವ್ಯದಲ್ಲಿ ವಿಫಲರಾಗಿರುತ್ತೀರಿ. ಅಲ್ಲದೆ ಕರ್ತವ್ಯದಲ್ಲಿ ನಿರ್ಲಕ್ಷತನ ಪ್ರದರ್ಶಿಸಿ ಅಕ್ರಮ ಸಂಭಾವನೆ ಸ್ವೀಕರಿಸಿ ಕರ್ತವ್ಯಚ್ಯುತಿ ಎಸಗಿರುತ್ತೀರಿ.

4. ಸದರ ಜುಗಾರ ಆಟವು ಲೊಂಡಾದ ಘಂಟಾ ಗಲ್ಲಿಯಲ್ಲಿ (ಗಾಂಧಿ ನಗರದಲ್ಲಿ) ಸಾರಾಯಿ ಅಂಗಡಿ ಇರುವ ಮನೆಯಲ್ಲಿ ನಡೆದಿದ್ದು ಅದನ್ನು ರೇಡ ಮಾಡಲು ಮೇಲಾಧಿಕಾರಿಗಳಿಂದ ವಾರಂಟ ಪಡೆದಿರುವುದಿಲ್ಲ. ಆದರೆ ನೀವು ಘಂಟಾ ಗಲ್ಲಿಯಲ್ಲಿ ಒಂದು ಮನೆಯ ಮುಂದೆ ಸಾರ್ವಜನಿಕ ಮಿಲ್ಲಾ ಸ್ಥಳದಲ್ಲಿ ನಡೆದಿದೆ ಅಂತಾ ಪಂಚನಾಮಾ ಮಾಡಿಸಿ, ಮೇಲಾಧಿಕಾರಿಗಳಿಗೆ ತಪ್ಪು ಮಾಹಿತಿಯನ್ನು ನೀಡಿ ನಿಮ್ಮ ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿರುವಿರ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರೀಕ್ಷಕರು ಉತ್ತರ ವಲಯ, ಬೆಳಗಾವಿ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:14–09–2006ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡಿ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತಿನಲ್ಲಿದ್ದಂತೆ ಎಂದು ಪರಿಗಣಿಸಲಾದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಇವರು ಎಸಗಿರುವ ಆರೋಪಗಳು ಸಾಬೀತಾಗಿದ್ದು, ಹಾಗೂ ಇವರು ಎಸಗಿರುವ ಘಟನೆ ಘೋರ ತರಹದ್ದಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 201 ಪೊಸಿಅ 2007 ಬೆಂಗಳೂರು, ದಿನಾಂಕ:19–09–2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸುಧಾಮ ಬಿ ನಾಯಕ್, ಪಿ.ಐ., ಜೋಯಿಡಾ ಪೊಲೀಸ್ ಠಾಣೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

ಪಿ.ಆರ್. 1736 (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ನಾಗರಾಜ, ಪಿ.ಐ., ಬೆಂಗಳೂರು ನಗರ ರವರು ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್ ಕೇಂದ್ರ ಸ್ಥಾನ, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:53/ಡಿಇ/ಆರ್,7/2003 ದಿನಾಂಕ:09–06–2003

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಕಮೀಷನರ್ ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:22/ಅಪೀಲು/2003 ದಿನಾಂಕ:21–02–2005

3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:06–11–2004

4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ(8)77/2005–06 ದಿನಾಂಕ:16–08–2006

**ಪ್ರಸ್ತಾವನೆ:**

ಶ್ರೀ ಎಸ್.ನಾಗರಾಜ, ಪಿ.ಐ., ಬೆಂಗಳೂರು ನಗರ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

<u>ದೋಷಾರೋಪಣೆ:-</u>

ಶ್ರೀ ಎಸ್.ನಾಗರಾಜ, ಪಿ.ಐ., ಆದ ನೀವು ಇಂದಿರಾನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ದಿ:20-04-2003ರಂದು ಮಧ್ಯಾಹ್ನ 1.15 ಸಮಯದಲ್ಲಿ ಶ್ರೀ.ವೀರೇಂದ್ರ ಎಂ ಸೋನಿ ಎಂಬುವವರು ಪೊಲೀಸ್ ಠಾಣೆಗೆ ಬಂದು ಇಂದಿರಾನಗರ 10ನೇ ಮುಖ್ಯರಸ್ತೆಯಲ್ಲಿ ಒಬ್ಬ ಅಪರಿಚಿತನು ಹಿಂದಿನಿಂದ ಅವರಿಗೆ ಚಾಕುವಿನಿಂದ ತಿವಿದು ಹಲ್ಲೆ ಮಾಡಿ ಕೊಲೆ ಮಾಡಲು ಪ್ರಯತ್ನ ಪಟ್ಟಿದ್ದು, ಆತನ ವಿರುದ್ಧ, ಕಾನೂನು ಕ್ರಮ ಕೈಗೊಳ್ಳಲು ನಿಮಗೆ ಬರವಣಿಗೆಯಲ್ಲಿ ತಿಳಿಸಿದ್ದರೂ ಸಹ ಅವರಿಂದ ಪಡೆದ ದೂರನ್ನು ನೀವು ಸ್ವೀಕರಿಸಿ ಮೊಕದ್ದಮೆ ದಾಖಲು ಮಾಡದೆ ಗಾಯಾಳುವನ್ನು ಆಸ್ಪತ್ರೆಗೆ ಕಳುಹಿಸಿ ಚಿಕಿತ್ಸೆ ಕೊಡಿಸದೆ ಬೇಜವಾಬ್ದಾರಿಯಿಂದ ವರ್ತಿಸಿರುತ್ತೀರಿ. ಫಿರ್ಯಾದಿ ಮತ್ತು ಇತರ ಜನರು ಕೂಡಿ ಅಪರಾಧಿಯನ್ನು ಬಂಧಿಸಿ ನಿಮ್ಮ ಮುಂದೆ ಹಾಜರು ಪಡಿಸಿದಾಗ್ಯೂ ಸಹ ಅಪರಾಧಿಯನ್ನು ವಿಚಾರಿಸಿ, ಆತನ ಸಹಚರರ ಬಗ್ಗೆ ವಿವರ ಪಡೆಯದೆ ಉದಾಸೀನತೆಯಿಂದ ಅವನನ್ನು ಠಾಣಾ ಲಾಕಪ್‌ನಲ್ಲಿ ಹಾಕಿರುತ್ತೀರಿ. ಒಬ್ಬ ಜವಾಬ್ದಾರಿಯುತ ಪೊಲೀಸ್ ಇನ್ಸ್‌ಪೆಕ್ಟರ್ ಆಗಿ ಠಾಣಾ ವ್ಯಾಪ್ತಿಯಲ್ಲಿ ವರದಿಯಾದ ಅಪರಾಧ ಪ್ರಕರಣವನ್ನು ತಕ್ಷಣ ದಾಖಲಿಸಿ ಸೂಕ್ತ ಕ್ರಮ ಕೈಗೊಳ್ಳುವುದನ್ನು ಬಿಟ್ಟು, ರಾತ್ರಿ 9.30ರವರೆಗೂ ಪ್ರಕರಣ ದಾಖಲು ಮಾಡದೆ ನಿಮ್ಮ ಕೈಕೆಳಗಿನ ಸಿಬ್ಬಂದಿಗಳಿಗೂ ಈ ವಿಷಯದಲ್ಲಿ ಸೂಕ್ತ ಮಾರ್ಗದರ್ಶನ ಮಾಡದೇ ಯಾವುದೇ ನಿರ್ದೇಶನ ಕೊಡದೇ ವಿನಾಕಾರಣ ವಿಳಂಬಿಸಿ ತೀವ್ರ ಕರ್ತವ್ಯ ಲೋಪ ಎಸಗಿರುವುದು ಕಂಡು ಬರುತ್ತದೆ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್ ಕೇಂದ್ರಸ್ಥಾನ ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:09-06-2003ರ ಆದೇಶದಲ್ಲಿ ಅರ್ಜಿದಾರರರಿಗೆ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗೆ ಧಕ್ಕೆಯಾಗದಂತೆ ಒಂದು ವರ್ಷಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಕಮೀಷನರ್ ಬೆಂಗಳೂರು ನಗರ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:21-02-2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತುಪಾಲನಾ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಒಬ್ಬ ಅಪರಿಚಿತ ಕೊಲೆ ಮಾಡಲು ಪ್ರಯತ್ನಿಸಿದ್ದು, ಆ ವ್ಯಕ್ತಿಯನ್ನು ಸರಿಯಾದ ರೀತಿಯಲ್ಲಿ ತನಿಖೆ ಮಾಡದೆ ಉದಾಸೀನತೆ ತೋರಿರುವುದು ಕಂಡುಬರುವುದು. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 144 ಪೊಸಿಅ 2007 ಬೆಂಗಳೂರು, ದಿನಾಂಕ:20-09-2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ನಾಗರಾಜ, ಪಿ.ಐ., ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

ಪಿ.ಆರ್. 1737 (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಬಿ.ವಿ.ರೇವಣ್ಣಚಾರ್, ಪಿಸಿ-1958, ಸಿಎಆರ್ (ದಕ್ಷಿಣ), ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:** 1) ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು ನಗರ ಸಶಸ್ತ್ರ ಮೀಸಲು ಪಡೆ (ದಕ್ಷಿಣ) ಬೆಂಗಳೂರು ಇವರ ಆದೇಶ ಸಂಖ್ಯೆ:20 ಡಿಇ ಆರ್-6/2005-06 ಒಬಿ 33:2086 ದಿನಾಂಕ:6/11-5-2006

2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್ ಸಿ.ಎ.ಆರ್ ಬೆಂಗಳೂರು ನಗರ ಇವರ ಆದೇಶ ಸಂಖ್ಯೆ: 12/ಅಪೀಲು/2006 ದಿನಾಂಕ:08-08-2005
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:25-09-2006
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು (2) 100/2006-07 ದಿನಾಂಕ:27-01-2007

**ಪ್ರಸ್ತಾವನೆ:**

ಶ್ರೀ ಬಿ.ವಿ.ರೇವಣ್ಣಚಾರ್, ಪಿಸಿ-1958, ಸಿಎಆರ್ (ದಕ್ಷಿಣ), ಬೆಂಗಳೂರು ನಗರ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ **6** ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:-**

1. ಶ್ರೀ ಬಿ.ವಿ.ರೇವಣ್ಣಚಾರ್, ಎಪಿಸಿ-1958, ಹೆಚ್.ಕ್ಯೂ. ಪಂಗಡ, ಸಿಎಆರ್ (ದಕ್ಷಿಣ), ಆದ ನೀವು ದಿ:**02-11-2005** ರಿಂದ **8-12-2005**ರವರೆಗೆ ಒಟ್ಟು **37** ದಿನಗಳು ಯಾವ ಪೂರ್ವಾನುಮತಿಯನ್ನು ಪಡೆಯದೆ ಹಾಗೂ ರಜೆ ಮಂಜೂರಾತಿಯನ್ನು ಪಡೆಯದೇ ಮತ್ತು ಯಾವುದೇ ವಿಧದಲ್ಲಿಯೂ ನಿಮ್ಮ ಗೈರುಹಾಜರಿಯ ಕಾರಣವನ್ನು ಮುಂಗಡವಾಗಿ ಕಛೇರಿಗೆ ತಿಳಿಸದೆ ನಂತರ ದಿ:**09-12-2005** ರಂದು ಕರ್ತವ್ಯಕ್ಕೆ ವರದಿಮಾಡಿಕೊಳ್ಳುವ ಸಲುವಾಗಿ ಅನಧಿಕೃತ ಗೈರುಹಾಜರಿಯ ವೈದ್ಯರ ಪ್ರಮಾಣ ಪತ್ರವನ್ನು ಮಂಡಿಸಿ ರಜೆಗಾಗಿ ಕೋರಿರುವುದು ಶಿಸ್ತಿನ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ನಿಮ್ಮ ಅಶಿಸ್ತು, ದುರ್ನಡತೆ, ಉದಾಸೀನತೆ ಹಾಗೂ ಬೇಜವಾಬ್ದಾರಿತನವನ್ನು ತೋರಿಸುತ್ತದೆ.
2. ಆರಕ್ಷಕ ಪೇದೆ 1958, ರೇವಣ್ಣಾಚಾರ್, **ಹೆಚ್.ಕ್ಯೂ.** ಪಂಗಡ ಸಿ.ಎ.ಆರ್(ದಕ್ಷಿಣ), ಬೆಂಗಳೂರು ಆದ ಇವರು ದಿ:**02-11-2005** ರಿಂದ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರುಹಾಜರಿಯಾಗಿ ಗೈರುಹಾಜರಿಯಲ್ಲಿ ಮುಂದುವರಿದ ಕಾರಣ ಇವರ ವಿರುದ್ಧ ಹೊರಡಿಸಿದ ಪೊಲೀಸ್ ಕೈಪಿಡಿ ನಿಯಮ **525** ರಡಿಯ ಪರಿತ್ಯಾಗ ನೋಟೀಸನ್ನು ದಿ:**09-12-2005** ರಂದು ಸ್ವೀಕರಿಸಿ ಅಂದೇ ಕರ್ತವ್ಯಕ್ಕೆ ಹಾಜರಾಗಿರುತ್ತೀರಿ. ಈ ಘಟಕದ ವಸತಿಗೃಹಗಳ ಸಾಲಿನಲ್ಲಿ ವಾಸವಿರುವ ಇವರು ತಮ್ಮ ಇರುವಿಕೆಯ ಬಗ್ಗೆ ಅಥವಾ ಯಾವುದೇ ಮಾಹಿತಿಯನ್ನು ಮೇಲಾಧಿಕಾರಿಗಳಲ್ಲಿ ತಿಳಿಸಲು ವಿಫಲವಾಗಿರುವುದು ಹಾಗೂ ಇವರ ಸೇವಾ ಅವಧಿಯಲ್ಲಿ ಶಿಕ್ಷಾಪಟ್ಟಿಯ ಪ್ರಕಾರ 13 ಬಾರಿ, ಒಟ್ಟು 271 ದಿನಗಳು ಅನಧಿಕೃತ ಗೈರುಹಾಜರಿಯಾಗಿದ್ದು, ಪದೇ ಪದೇ ಗೈರು ಹಾಜರಿಯಾಗುವ ಹವ್ಯಾಸವನ್ನು ಬೆಳೆಸಿಕೊಂಡಿರುವುದು ನಿಮ್ಮ ಸರ್ಕಾರಿ ಕೆಲಸದಲ್ಲಿ ತೋರಿರುವ ಬಾರಿ ಅಶಿಸ್ತು, ಬೇಜವಾಬ್ದಾರಿತನ ಹಾಗೂ ನಿರ್ಲಕ್ಷತೆಯನ್ನು ಎತ್ತಿ ತೋರಿಸುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಆರಕ್ಷಕ ಆಯುಕ್ತರು ನಗರ ಸಶಸ್ತ್ರ ಮೀಸಲು ಪಡೆ ದಕ್ಷಿಣ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:**06-05-2006**ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿ ಹಾಗೂ ಅನಧಿಕೃತ ಗೈರುಹಾಜರಿ ಅವಧಿ ದಿ:**01-11-2005** ರಿಂದ **08-12-2005**ರವರೆಗಿನ ಒಟ್ಟು **37** ದಿನಗಳನ್ನು ವೇತನ ರಹಿತ ರಜೆಯೆಂದು ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್ ಸಿ.ಎ.ಆರ್. ಬೆಂಗಳೂರು ನಗರ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:**08-08-2006**ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಮೇಲಾಧಿಕಾರಿಗಳಿಗೆ ತಿಳಿಸದೇ ಅನಧಿಕೃತವಾಗಿ ಗೈರುಹಾಜರಾಗಿರುವುದು ದಾಖಲೆಗಳಿಂದ ಕಂಡುಬಂದಿದ್ದು ಹಾಗೂ ಪದೇ ಪದೇ ಗೈರುಹಾಜರಾಗಿರುವ ಪ್ರವೃತ್ತಿಯನ್ನು ಬೆಳೆಸಿಕೊಂಡಿರುತ್ತೀರ ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಕ್ಷಿ ಆಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

ಸರ್ಕಾರದ ಆದೇಶ ಸಂಖ್ಯೆ:ಒಇ 221 ಪೊಸಿಅ 2007 ಬೆಂಗಳೂರು, ದಿನಾಂಕ:19–09–2007

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಿ.ವಿ.ರೇವಣ್ಣಚಾರ್, ಪಿಸಿ–1958, ಸಿಎಆರ್ (ದಕ್ಷಿಣ), ಬೆಂಗಳೂರು ನಗರ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಆರ್.ಎ. ಕುಲಕರ್ಣಿ

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಪೊಲೀಸ್ ಸೇವೆಗಳು)

ಪಿ.ಆರ್. 1738

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ವಿಶ್ವಭಾರತಿ ಗೃಹ ನಿರ್ಮಾಣ ಸಹಕಾರ ಸಂಘ, ಬೆಂಗಳೂರು ಇವರಿಗೆ ಜಮೀನನ್ನು ಸಗಟು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ನಅಇ 267 ಬೆಂಆಸೇ2004, ದಿನಾಂಕ:4-4-2006.

2) ಆಯುಕ್ತರು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ಇವರ ಪತ್ರ ಸಂಖ್ಯೆ:ಬೆಂಅಪ್ರಾ/ಆಯು/ಆವಿ/ಗೇರಹಳ್ಳಿ/ಉಆ(ಭೂಸ್ವಾ)/77/2007-08, ದಿನಾಂಕ:23-08-2007.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:04/04/2006ರ ಸರ್ಕಾರದ ಆದೇಶದಲ್ಲಿ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ (ಸಗಟು ಹಂಚಿಕೆ) ನಿಯಮಗಳು, 1995 ರಲ್ಲಿ ನಿರ್ದಿಷ್ಟಪಡಿಸಿರುವ ವಿಧಿವಿಧಾನಗಳನ್ವಯ ಸಗಟು ಹಂಚಿಕೆ ಮಾಡಬೇಕಾದಲ್ಲಿ, ಸದರಿ ಜಮೀನು ಖಾಲಿ ಇರಬೇಕಾಗಿದ್ದು, ಪ್ರಸ್ತಾವಿತ ಜಮೀನು ಪ್ರಾಧಿಕಾರದ ವಶದಲ್ಲಿದ್ದರೂ ಸಹ ಸದರಿ ಜಮೀನಿನಲ್ಲಿ ಶೇ.70 ರಷ್ಟು ಅನಧಿಕೃತ ಕಟ್ಟಡಗಳು ಬಂದಿರುವುದರಿಂದ ಮೇಲಿನ ನಿಯಮಗಳಡಿ ಸದರಿ ಕಟ್ಟಡಗಳನ್ನೊಳಗೊಂಡ ಜಮೀನನ್ನು ಸಗಟು ಹಂಚಿಕೆ ಮಾಡಲು ಅವಕಾಶ ಇಲ್ಲದಿರುವ ಮೇರೆಗೆ, ಮೇಲಾಗಿ ಹಂಚಿಕೆ ನಿಯಮಗಳಡಿಯಲ್ಲಿ ಹಂಚಿಕೆ ಮಾಡಲು ಪ್ರಸ್ತಾವಿತ ಜಮೀನಿನಲ್ಲಿ ಬಂದಿರುವ ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸಲು ಕಾನೂನಿನಲ್ಲಿ ಅವಕಾಶ ವಿಲ್ಲದಿದ್ದುದರಿಂದ ಪ್ರಾಧಿಕಾರದ ದಿನಾಂಕ:21-07-1999ರ ಠರಾವನ್ನು ಅನುಷ್ಠಾನಗೊಳಿಸಬೇಕೆಂಬ ಸಂಘದ ಕೋರಿಕೆಯನ್ನು ತಿರಸ್ಕರಿಸಿ ಆದೇಶಿಸಲಾಗಿತ್ತು.

ಈ ಹಿಂದೆ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಬೆಂಗಳೂರು ಉತ್ತರ ತಾಲ್ಲೂಕು, ಗೇರೆಹಳ್ಳಿ ಗ್ರಾಮದ ಸರ್ವೆ ನಂ.16, 17, 18, 19 ಹಾಗೂ ಹೊಸಕೆರೆಹಳ್ಳಿ ಗ್ರಾಮದ ಸರ್ವೆ ನಂ.101, 103/1, 103/2, 104/1, 104/2, 105 ಹಾಗೂ 106 ರಲ್ಲಿನ ಒಟ್ಟು 80 ಎಕರೆ 13 ಗುಂಟೆ ಜಮೀನನ್ನು ಬನಶಂಕರಿ 3ನೇ ಹಂತದ ಬಡಾವಣೆ ನಿರ್ಮಾಣಕ್ಕಾಗಿ ದಿನಾಂಕ:9-5-1968 ರಲ್ಲಿ ಪ್ರಾಥಮಿಕ ಅಧಿಸೂಚನೆಯನ್ನು ಮತ್ತು ದಿನಾಂಕ:28-10-1971 ರಲ್ಲಿ ಅಂತಿಮ ಅಧಿಸೂಚನೆಯನ್ನು ಹೊರಡಿಸಿ ಸದರಿ ಜಮೀನುಗಳನ್ನು ಹಂತ ಹಂತವಾಗಿ ಸ್ವಾಧೀನಕ್ಕೆ ಪಡೆದುಕೊಂಡಿರುತ್ತದೆ ಹಾಗೂ ದಿನಾಂಕ:17-6-1977, 09-01-1978 ಮತ್ತು 07-10-1995 ರಂದು ಇಂಜಿನೀಯರಿಂಗ್ ವಿಭಾಗಕ್ಕೆ ವಹಿಸಿಕೊಟ್ಟು ಭೂಸ್ವಾಧೀನ ಕಾಯ್ದೆ, ಕಲಂ 16(2)ರ ಅಧಿಸೂಚನೆಯನ್ನು ಹೊರಡಿಸಿರುತ್ತದೆ.

ಆದರೆ, ವಿಶ್ವಭಾರತಿ ಗೃಹ ನಿರ್ಮಾಣ ಸಹಕಾರ ಸಂಘವು ಇದಕ್ಕೂ ಮುನ್ನ 1973 ರಲ್ಲಿಯೇ ಅಸ್ತಿತ್ವಕ್ಕೆ ಬಂದಿದ್ದು, ಪ್ರಾಧಿಕಾರವು ಭೂಸ್ವಾಧೀನ ಕಾಯ್ದೆ, ಕಲಂ 16(2)ನ್ನು ಹೊರಡಿಸುವ ಪೂರ್ವದಲ್ಲಿಯೇ ಸಂಘವು ಮೇಲ್ಕಂಡ ಸರ್ವೆ ನಂಬರುಗಳ ಜಮೀನನ್ನು ಕೊಳ್ಳಲು ಶ್ರೀ.ಕಾಶಿಪತಿ ಮತ್ತಿತರೊಡನೆ ಕರಾರು ಮಾಡಿಕೊಂಡು ಖಾಸಗಿ ಬಡಾವಣೆ ರಚಿಸಿ ತನ್ನ ಸಂಘದ ಸದಸ್ಯರಿಗೆ ಹಂಚಿಕೆ ಮಾಡಿರುತ್ತದೆ ಹಾಗೂ ಪ್ರಾಧಿಕಾರದ ಭೂಸ್ವಾಧೀನ ಕ್ರಮಗಳನ್ನು ಸಂಘದ ಪರವಾಗಿ ಕೈಬಿಡಲು ಅಥವಾ ಪರ್ಯಾಯವಾಗಿ ಜಮೀನನ್ನು ಸಗಟು ಹಂಚಿಕೆ ಮಾಡಲು ನಿರ್ದೇಶನ ನೀಡಬೇಕೆಂದು ಕೋರಿ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ.11973/83ರನ್ನು ಸಲ್ಲಿಸಿದ್ದು, ಮಾನ್ಯ ನ್ಯಾಯಾಲಯವು ದಿನಾಂಕ.16-6-1991ರಂದು ಸಂಘದ ಪರವಾಗಿ ತೀರ್ಪು ನೀಡಿದ್ದು, ಸದರಿ ತೀರ್ಪಿನ ವಿರುದ್ಧ ಪ್ರಾಧಿಕಾರವು ವಿಭಾಗೀಯ ಪೀಠದ ಮುಂದೆ ರಿಟ್ ಅಪೀಲ್ ಸಂಖ್ಯೆ.13681/91ನ್ನು ಸಲ್ಲಿಸಲಾಗಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 16-6-1991ರಂದು ಸಂಘದ ಪರವಾಗಿ ನೀಡಲಾಗಿದ್ದ ತೀರ್ಪನ್ನು ತಳ್ಳಿ ಹಾಕಿರುತ್ತದೆ. ಈ ಸಂಬಂಧವಾಗಿ ಸಂಘವು ಸಲ್ಲಿಸಿದ್ದ ರಿವ್ಯೂ ಅರ್ಜಿಗಳನ್ನು ನ್ಯಾಯಾಲಯವು ವಜಾ ಮಾಡಿರುತ್ತದೆ ಹಾಗೂ ಸಂಘವು ಸರ್ವೋಚ್ಚ ನ್ಯಾಯಾಲಯದಲ್ಲಿ ಸಲ್ಲಿಸಲಾಗಿದ್ದ ಮೇಲ್ಮನವಿ ಎಸ್ಎಲ್‌ಪಿ ಸಂಖ್ಯೆ.27818/95 ಸಹ ವಜಾ ಆಗಿರುತ್ತದೆ.

ಪುನ: ವಿಶ್ವಭಾರತಿ ಗೃಹ ನಿರ್ಮಾಣ ಸಹಕಾರ ಸಂಘವು, ದಿನಾಂಕ:4-4-2006ರ ಆದೇಶದ ವಿರುದ್ಧ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ:3931-3940/2002 (ಬಿಡಿಎ) C/w ರಿಟ್ ಅಪೀಲ್ 3926/2002 ಮತ್ತು ರಿಟ್ ಅಪೀಲ್ಸ್ ನಂ.3941-3951/2002ನ್ನು ಸಲ್ಲಿಸಿತ್ತು. ದಿನಾಂಕ:24-09-2004 ರಲ್ಲಿ ರಾಜ್ಯ ಉಚ್ಚ ನ್ಯಾಯಾಲಯವು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ದಿನಾಂಕ:21-7-1999ರ ಠರಾವಿನಂತೆ ಸಂಘಕ್ಕೆ ಪ್ರಾಧಿಕಾರದಿಂದ ಜಮೀನನ್ನು ಸಗಟು ಹಂಚಿಕೆ ಮಾಡುವ ಬಗ್ಗೆ ಕಾನೂನಿನಡಿಯಲ್ಲಿ ಪರಿಗಣಿಸುವಂತೆ ಸರ್ಕಾರಕ್ಕೆ ಸೂಚಿಸಿರುತ್ತದೆ.

ವಿಶ್ವಭಾರತಿ ಗೃಹ ನಿರ್ಮಾಣ ಸಹಕಾರ ಸಂಘದ ಸದಸ್ಯರುಗಳು ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ರಿಟ್ ಅರ್ಜಿ ಸಂಖ್ಯೆ:13917/2006 ಮತ್ತು ಇತರೆ ರಿಟ್ ಅರ್ಜಿ ಗಳಿಗೆ ಸಂಬಂಧಿಸಿದಂತೆ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ:20-11-2006 ರಂದು ಮಧ್ಯಂತರ ಆದೇಶ ನೀಡಿ ಸದಸ್ಯರುಗಳ ಮನವಿಯನ್ನು 12 ವಾರಗಳ ಕಾಲಾವಧಿಯೊಳಗೆ ಪರಿಗಣಿಸುವಂತೆ ಆದೇಶಿಸಿರುತ್ತದೆ ಹಾಗೂ ದಿನಾಂಕ:5-6-2007 ರಂದು ಕಾಲಮಿತಿಯನ್ನು ನಿಗದಿಪಡಿಸದೆ ಸಂಘದ ಮತ್ತು ಸದಸ್ಯರುಗಳ ಮನವಿಯನ್ನು ಪರಿಗಣಿಸುವಂತೆ ಸರ್ಕಾರಕ್ಕೆ ನಿರ್ದೇಶನ ನೀಡಿರುತ್ತದೆ. ಅದರಂತೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅಭಿಪ್ರಾಯವನ್ನು ಸರ್ಕಾರವು ದಿನಾಂಕ:19-4-2007ರ ಪತ್ರದಲ್ಲಿ ಕೋರಲಾಗಿ, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಮೇಲೆ ಓದಲಾದ (2) ರಲ್ಲಿ ಈ ಕೆಳಕಂಡಂತೆ ಅಭಿಪ್ರಾಯಿಸಿರುತ್ತದೆ.

"As Section 38-B (iv) of the BDA Act provides for bulk allotment of sites to Societies also and the resolution dated. 21-7-1999 of the Authority is in accordance with the said provision and there is also direction from the Hon'ble High Court to the Government to consider the said resolution in accordance with law, I am of opinion that the Government is fully empowered to approve the said resolution dated.21-7-1999 passed by the Authority making bulk allotment of lands in favour of the said society, which was done as per the direction of the Government.

Now, the Government has to only direct the Authority to implement the resolution dated.21-7-99 by making bulk allotment of the lands in question to the society".

ಈ ಬಗ್ಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವಿಷಯ ಸಂಖ್ಯೆ:128/99, ದಿನಾಂಕ:21-7-1999 ರಲ್ಲಿ ಸದರಿ ಗೃಹ ನಿರ್ಮಾಣ ಸಹಕಾರ ಸಂಘಕ್ಕೆ ಜಮೀನನ್ನು ಸಗಟು ಹಂಚಿಕೆ ಮಾಡಲು ನಿರ್ಣಯಿಸಿರುವ ಠರಾವನ್ನು ಅನುಷ್ಠಾನಗೊಳಿಸುವ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

ಸರ್ಕಾರವು ಪ್ರಾಧಿಕಾರದ ಪ್ರಸ್ತಾವನೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಬಗೆಹರಿಸಲು ಹಾಗೂ ರಾಜ್ಯ ಉಚ್ಚ ನ್ಯಾಯಾಲಯದ ಆದೇಶವನ್ನು ಪಾಲನೆಮಾಡುವ ನಿಟ್ಟಿನಲ್ಲಿ ವಿಶ್ವಭಾರತಿ ಗೃಹ ನಿರ್ಮಾಣ ಸಹಕಾರ ಸಂಘದ ಮನವಿಯನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ನಅಇ 267 ಬೆಂಅಸೇ 2004, ಬೆಂಗಳೂರು, ದಿನಾಂಕ:04ನೇ ಅಕ್ಟೋಬರ್, 2007.**

ಪ್ರಸ್ತಾವನೆಯಲ್ಲಿ ವಿವರಿಸಿದ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಆದೇಶ ಸಂಖ್ಯೆ:ನಅಇ 267 ಬೆಂಅಸೇ 2004 ದಿನಾಂಕ:04-04-2006ನ್ನು ರದ್ದುಗೊಳಿಸಿ ಸದರಿ ಸಮಸ್ಯೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಬಗೆಹರಿಸಲು ರಾಜ್ಯ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ:13917/2006, ದಿನಾಂಕ:20-11-2006ರಲ್ಲಿ ನೀಡಿರುವ ನಿರ್ದೇಶನದ ಹಿನ್ನೆಲೆಯಲ್ಲಿ, ಈ ಪ್ರಕರಣವನ್ನು ಪೂರ್ವ ನಿದರ್ಶನ ಪ್ರಕರಣವೆಂದು ಪರಿಗಣಿಸದೇ ಇದೊಂದು ವಿಶೇಷ ಪ್ರಕರಣವೆಂದು ಪರಿಗಣಿಸಿ ಸದರಿ ಪ್ರಸ್ತಾವನೆಗೆ ಸಂಬಂಧಿಸಿದಂತೆ ಪ್ರಾಧಿಕಾರದ ಶಿಫಾರಸ್ಸನ್ನು ತಾತ್ವಿಕವಾಗಿ ಅಂಗೀಕರಿಸುತ್ತಾ ಸದರಿ ಜಮೀನನ್ನು ವಿಶ್ವಭಾರತಿ ಗೃಹ ನಿರ್ಮಾಣ ಸಹಕಾರ ಸಂಘ, ಬೆಂಗಳೂರು, ಇವರಿಗೆ ಸಗಟು ಹಂಚಿಕೆ ಮಾಡುವುದರ ಮುಖಾಂತರ ದಿನಾಂಕ:21-7-1999ರ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಠರಾವನ್ನು ಈ ಕೆಳಕಂಡ ಷರತ್ತುಗಳಿಗೊಳಪಡಿಸಿ, ಅಂಗೀಕರಿಸಿದೆ.

1) ಸದರಿ ಬಡಾವಣೆಗೆ ಸಂಬಂಧಿಸಿದಂತೆ ಈಗಾಗಲೇ ಹಂಚಿಕೆ ಮಾಡಲಾದ/ಹಂಚಿಕೆಗೆ ಬಾಕಿ ಉಳಿದಿರುವ ನಿವೇಶನಗಳನ್ನು ಸದಸ್ಯರ ನೈಜತೆಯನ್ನು ಜೇಷ್ಠತೆಗೆ ಅನುಗುಣವಾಗಿ ಸಂಘವು ಪರಿಗಣಿಸಿ ಹಂಚಿಕೆ ಮಾಡುವ ಬಗ್ಗೆ ಅವಶ್ಯಕವಿರುವ ಷರತ್ತನ್ನು ಪ್ರಾಧಿಕಾರವು ವಿಧಿಸುವುದು.
2) ಪ್ರಾಧಿಕಾರವು ಭೂಸ್ವಾಧೀನ ವೆಚ್ಚ, ಬಡಾವಣೆ ಅಭಿವೃದ್ಧಿಗಾಗಿ ತಗಲುವ ವಾಸ್ತವಿಕ ವೆಚ್ಚ ಮತ್ತು ಮೇಲುಸ್ತುವಾರಿ ವೆಚ್ಚಗಳನ್ನು ಗಣನೆಗೆ ತೆಗೆದು ಕೊಂಡು ಸೂಕ್ತ ದರವನ್ನು ವಿಧಿಸಿ ಹಂಚಿಕೆ ಮಾಡುವುದು.
3) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯು ನಿವೇಶನದಾರರಿಂದ ನಿಗಧಿತ ಅಭಿವೃದ್ಧಿ ಶುಲ್ಕವನ್ನು ಪಾವತಿಸಿಕೊಂಡು, ಖಾತಾ ನೋಂದಣಿ ಮಾಡಿ ನಕ್ಷೆ ಮಂಜೂರಾತಿ ನೀಡುವಂತೆ ನಿರ್ದೇಶನ ನೀಡುವುದು.
4) ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಪ್ರಾಧಿಕಾರವು ಆಡಳಿತಾತ್ಮಕವಾಗಿ ತನ್ನ ವಿವೇಚನೆಯನುಸಾರ ಅವಶ್ಯಕವಿರುವ ಷರತ್ತನ್ನು ವಿಧಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎಂ.ಎಸ್.ಪ್ರೇಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆಖ. 1773

## ವಸತಿ ಸಚಿವಾಲಯ

**ವಿಷಯ:** ಗುಲ್ಬರ್ಗಾ ಜಿಲ್ಲೆಯ ಶಹಾಪುರ ತಾಲ್ಲೂಕಿನ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ಬದಲಾವಣೆ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂ.ವಇ/42/ಹೆಚ್ಎಂ/1998, ದಿನಾಂಕ: 10–5–2000.
2 ಸರ್ಕಾರದ ಆದೇಶ ಸಂಖ್ಯೆ: ವಇ 173 ಹೆಚ್ಎಎಸ್ 06.
3 ಮಾನ್ಯ ಕೃಷಿ ಮಾರುಕಟ್ಟೆ ಸಚಿವರ ನಡವಳಿ.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಓದಲಾದ (1)ರ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಓದಲಾದ (2)ರ ಆದೇಶದಲ್ಲಿ ಗುಲ್ಬರ್ಗಾ ಜಿಲ್ಲೆಯ ಶಹಾಪುರ ತಾಲ್ಲೂಕಿನ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸಿ ಆದೇಶ ಹೊರಡಿಸಲಾಗಿತ್ತು.

ಓದಲಾದ (3)ರಲ್ಲಿ ಮಾನ್ಯ ಕೃಷಿ ಮಾರುಕಟ್ಟೆ ಸಚಿವರು ಅವರ ನಡವಳಿಯಲ್ಲಿ ಶ್ರೀ ನೀಲಪ್ಪ ಡಿ. ಚೌಧರಿ, ಗಾಂಧಿಚೌಕ, ಶಹಾಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಸಾಮಾನ್ಯ ಅಭ್ಯರ್ಥಿ ಇವರನ್ನು ಅಧ್ಯಕ್ಷರನ್ನಾಗಿ ಮಾಡುವಂತೆ ಹಾಗೂ ಅವರ ಬದಲಿಗೆ ಶ್ರೀ ಮರೆಪ್ಪ ತಿಪ್ಪಣ್ಣ ಬಜಣ್ಣವರ್, ಹಳಿಸಗರ, ಶಹಾಪುರ ತಾ: ಗುಲ್ಬರ್ಗಾ ಜಿಲ್ಲೆ, ಇವರನ್ನು ಶಹಾಪುರ ತಾಲ್ಲೂಕಿನ ನಗರ ಆಶ್ರಯ ಸಮಿತಿಗೆ ಸದಸ್ಯರನ್ನಾಗಿ ನಾಮಕರಣ ಮಾಡುವಂತೆ ಕೋರಿರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ/173/ಹೆಚ್ಎಎಸ್/2006, ಬೆಂಗಳೂರು, ದಿನಾಂಕ: 16ನೇ ಜುಲೈ 2007**

ಮೇಲಿನ ಪ್ರಸ್ತಾವನೆಯ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆಯ ಶಹಾಪುರ ತಾಲ್ಲೂಕು ನಗರ ಆಶ್ರಯ ಸಮಿತಿಗೆ ಶ್ರೀ ನೀಲಪ್ಪ ಡಿ. ಚೌಧರಿ, ಗಾಂಧಿಚೌಕ, ಶಹಾಪುರ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ ಇವರನ್ನು ಅಧ್ಯಕ್ಷರನ್ನಾಗಿ ಹಾಗೂ ಶ್ರೀ ಮರೆಪ್ಪ ತಿಪ್ಪಣ್ಣ ಬಜಣ್ಣವರ್, ಹಳಿಸಗರ, ಶಹಾಪುರ ತಾ: ಗುಲ್ಬರ್ಗಾ ಜಿಲ್ಲೆ, ಇವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1542

**ರಂಗಮ್ಮ**

ಪೀಠಾಧಿಕಾರಿ–2, ವಸತಿ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಮೆ॥ ವಂಡರ್ ಲಾ ಹಾಲಿಡೇಸ್ ಪ್ರೈ.ಲಿ. ಸಂಸ್ಥೆಯು ಉದ್ದೇಶಿಸಿರುವ ಅಮ್ಯೂಸ್‌ಮೆಂಟ್ ಪಾರ್ಕ್ ಯೋಜನೆ ಸಂಬಂಧ ಬಿಎಂಐಸಿಎಪಿಎಗೆ ಪಾವತಿಸಬೇಕಾದ ಮೊತ್ತದಿಂದ ಶುಲ್ಕ ವಿನಾಯ್ತಿ ನೀಡುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಪತ್ರ ಸಂಖ್ಯೆ: ನಅಇ 722 ಅಪ್ರಾ 06, ದಿ: 1–12–06.
2 ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ರವರ ಪತ್ರ ಸಂಖ್ಯೆ: ಕೆಯುಎಂಇ3/ಎಸ್‌ಡಬ್ಲ್ಯೂಎ–226/178/2002–03, ದಿ: 6–3–03.
3 ಪ್ರವಾಸೋದ್ಯಮ ಇಲಾಖೆಯ ದೃಢೀಕರಣ ಪತ್ರ ಸಂಖ್ಯೆ: ಪ್ರಇ/ಐರಾಮಗಸ/15/2003–04, ದಿ: 20–1–06.
4 ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ ಮತ್ತು ಕಾರ್ಯಕಾರಿ ಸದಸ್ಯರು, ಕೆಐಎಡಿಬಿ ಇವರ ಪತ್ರ ಸಂಖ್ಯೆ: ಐಎಡಿಬಿ/14699/3093/06–07, ದಿ: 23–1–07.
5 ಮೆ॥ ವಂಡರ್ ಲಾ ಹಾಲಿಡೇಸ್ ಪ್ರೈ.ಲಿ. ಸಂಸ್ಥೆಯ ಸೀನಿಯರ್ ಮ್ಯಾನೇಜರ್‌ರವರ ಮನವಿ ದಿ: 18–12–06 ಮತ್ತು 8–2–07.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಮೆ॥ ವಂಡರ್ ಲಾ ಹಾಲಿಡೇಸ್ ಪ್ರೈ.ಲಿ., ಸಂಸ್ಥೆಯು ಉದ್ದೇಶಿಸಿರುವ ಅಮ್ಯೂಸ್‌ಮೆಂಟ್ ಪಾರ್ಕ್ ಯೋಜನೆಗೆ, ಹಾಲಿ ಚಾಲ್ತಿಯಲ್ಲಿರುವ ಟೂರಿಸಂ ಪಾಲಿಸಿಯನ್ವಯ ಬಿಎಂಐಸಿಪಿಎ ವತಿಯಿಂದ ಭೂ ಉಪಯೋಗ ಬದಲಾವಣೆಗೆ ಅನುಮತಿ ಪಡೆಯುವ ಅವಶ್ಯಕತೆ ಇಲ್ಲವೆಂದು ತಿಳಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಬನ್ನಿಕುಪ್ಪೆ ಗ್ರಾಮದ ಸರ್ವೆ ಸಂ: 107(ಭಾ), 108(ಭಾ), 109(ಭಾ), 166 ರಿಂದ 171 ರಲ್ಲಿ ಹಾಗೂ ವಾಜರಹಳ್ಳಿ ಗ್ರಾಮ ಸರ್ವೆ ನಂ: 28(ಭಾ), 86, 87, 88ರಲ್ಲಿ ಮೆ: ವಂಡರ್ ಲಾ ಹಾಲಿಡೇಸ್ ಪ್ರೈ.ಲಿ. ಸಂಸ್ಥೆಯು ಉದ್ದೇಶಿಸಿರುವ ಅಮ್ಯೂಸ್‌ಮೆಂಟ್ ಪಾರ್ಕ್ ಮತ್ತು ವಾಟರ್ ಥೀಮ್ ಪಾರ್ಕ್ ಯೋಜನೆ ಬಗ್ಗೆ 226ನೇ ರಾಜ್ಯ ಮಟ್ಟದ ಏಕಗವಾಕ್ಷಿ ಸಮಿತಿ ಸಭೆ ದಿನಾಂಕ: 27–2–03ರಲ್ಲಿ ಚರ್ಚಿಸಿ, ಅನುಮೋದಿಸಲಾಗಿರುತ್ತದೆಯೆಂದು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ ಹಾಗೂ ಸದಸ್ಯ ಕಾರ್ಯದರ್ಶಿ, ರಾಜ್ಯ ಮಟ್ಟದ ಏಕಗವಾಕ್ಷಿ ಇವರು ತಿಳಿಸಿರುತ್ತಾರೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಪ್ರವಾಸೋದ್ಯಮ ಇಲಾಖೆಯ ಆಯುಕ್ತರು, ಮೆ: ವಂಡರ್ ಲಾ ಹಾಲಿಡೇಸ್ ಪ್ರೈ.ಲಿ. ಸಂಸ್ಥೆಯು ರಾಮನಗರ ತಾಲ್ಲೂಕು, ಬಿಡದಿ ಹೋಬಳಿ, ಬನ್ನಿಕುಪ್ಪೆ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಅಮ್ಯೂಸ್‌ಮೆಂಟ್ ಪಾರ್ಕ್ ಮತ್ತು ವಾಟರ್ ಥೀಮ್ ಪಾರ್ಕ್ ಯೋಜನೆಯನ್ನು ಪೂರ್ಣಗೊಳಿಸಿರುತ್ತದೆ ಎಂದು ಧೃಢೀಕರಿಸಿರುತ್ತಾರೆ.

ಮೇಲೆ ಓದಲಾದ (4)ರ ಪತ್ರದಲ್ಲಿ ಮೇಲ್ಕಂಡ ಯೋಜನೆಗೆ ಸಂಬಂಧಿಸಿದ ಜಮೀನುಗಳನ್ನು ಕೆಐಎಡಿಬಿ ಈ ಹಿಂದೆಯೇ ಭೂ ಸ್ವಾಧೀನ ಪಡಿಸಿಕೊಂಡಿದ್ದು, ಸದರಿ ಯೋಜನೆಯ ನಿರ್ಮಾಣ ಕಾರ್ಯಕ್ಕಾಗಿ ಕಟ್ಟಡ ನಿಯಮಾವಳಿಗಳನ್ವಯ ಅನುಮತಿಸಿರುವುದರಿಂದ ಹಾಗೂ ಕೈಗಾರಿಕಾ ವಲಯಕ್ಕೆ ಭೂ ಬದಲಾವಣೆಗೆ ಅನುಮೋದನೆ ನೀಡಲಾಗಿರುವುದರಿಂದ, ಕೆಐಎಡಿಬಿ ಕಾಯ್ದೆ ಕಲಂ 28(4) ರನ್ವಯ ಮತ್ತೆ ಭೂ ಉಪಯೋಗ ಬದಲಾವಣೆಗೆ ಅನುಮತಿ ಪಡೆಯುವ ಅವಶ್ಯಕತೆ ಇಲ್ಲವೆಂದು ಮುಖ್ಯ ಕಾರ್ಯನಿರ್ವಾಹಣಾಧಿಕಾರಿ ಮತ್ತು ಕಾರ್ಯಕಾರಿ ಸದಸ್ಯರು, ಕೆ.ಐ.ಎ.ಡಿ.ಬಿ. ಇವರು ಅಭಿಪ್ರಾಯಪಟ್ಟಿರುತ್ತಾರೆ.

ಮೇಲೆ ಓದಲಾದ (5)ರ ಪತ್ರದಲ್ಲಿ ವಂಡರ್ ಲಾ ಸಂಸ್ಥೆಯು ಮೇಲೆ ನಮೂದಿಸಿದ ಮೂರು ಇಲಾಖೆಗಳಿಂದ ಉದ್ದೇಶಿಸಿರುವ ಯೋಜನೆಗೆ ಈಗಾಗಲೇ ಅನುಮತಿ ದೊರೆತಿದ್ದು, ಸದರಿ ಯೋಜನೆಯನ್ನು ಅನುಷ್ಠಾನಗೊಳಿಸುವ ದೃಷ್ಟಿಯಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಪ್ರಕರಣ 18A(5) ರನ್ವಯ ಬಿಎಂಐಸಿಪಿಎಗೆ ಪಾವತಿಸಬೇಕಾದ ಮೊತ್ತದಿಂದ ಶುಲ್ಕ ವಿನಾಯಿತಿ ನೀಡಲು ಮನವಿ ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 722 ಅಪ್ರಾ 2006, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಮೆ: ವಂಡರ್ ಲಾ ಹಾಲಿಡೇಸ್ ಪ್ರೈ.ಲಿ. ಸಂಸ್ಥೆಯು ಬನ್ನಿಕುಪ್ಪೆ ಗ್ರಾಮದ ಸರ್ವೆ ನಂ: 107(ಭಾ), 108(ಭಾ), 109(ಭಾ), 166 ರಿಂದ 171 ರಲ್ಲಿ ಹಾಗೂ ವಾಜರಹಳ್ಳಿ ಗ್ರಾಮ ಸರ್ವೆ ನಂ: 28 (ಭಾ), 86, 87, 88 ಒಟ್ಟು 81 ಎಕರೆ 30 ಗುಂಟೆ ವಿಸ್ತೀರ್ಣದ ಜಮೀನುಗಳಲ್ಲಿ ಉದ್ದೇಶಿಸಿರುವ ಅಮ್ಯೂಸ್‌ಮೆಂಟ್ ಪಾರ್ಕ್ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಪ್ರಕರಣ 18(3)ರನ್ವಯ ಬೆಂಗಳೂರು ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಪ್ಲಾನಿಂಗ್ ಅಥಾರಿಟಿಗೆ ಪಾವತಿಸಬೇಕಾದ ಮೊತ್ತದಿಂದ ಶುಲ್ಕ ವಿನಾಯ್ತಿ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.686

**ಎನ್.ವೈ. ಸಾಗರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ

## ENERGY SECRETARIAT

**Sub:** Quantity of renewable energy purchased by ESCOMs-fixation of limit.

**Preamble:**

Karnataka Electricity Regulatory Commission has fixed a maximum limit on 10% of the share of renewable energy in the total quantum of energy purchased by each ESCOM during a year. The share of renewable energy in total energy purchased by ESCOMs is likely to reach 10% during the year 2007-08. This would mean that the ESCOMs would be barred from purchasing any further quantum of energy from renewable sources and hence further development of renewable energy in Karnataka would come to a halt.

Karnataka has one of the highest potentials for renewable energy in India. This is particularly true in the case of wind energy. There has been good progress in development of wind energy in Karnataka. There has also been a good progress in mini-hydel projects. However, there is still considerable potential in both wind energy and mini hydel. Although there is great potential for biomass energy, the installed capacity of biomass energy projects is still very small. The question is whether inspite of a considerable potential for renewable energy that is yet to be tapped, a brake should be put on the further expansion of renewable energy by adhering to the cap of 10% fixed by KERC.

The advantages of permitting further expansion of renewable energy in the State include the following:-

(i) Renewable energy is clean-energy which does not cause environmental pollution and does not lead to the emission of green house gases;

(ii) Renewable energy reduces dependence on fossil fuels, which are not renewable. This is more relevant in Karnataka, which does not have any reserves of coal, oil or gas;

(iii) Renewable energy involves decentralized generation at many locations within the State which brings down T & D losses;

(iv) The State has been facing power shortage for many years and cannot afford to exclude any available source of energy in the interests of energy security;

(v) Although the present tariffs for renewable energy are higher than the average tariffs for hydro electricity and electricity generated by coal-based power plants, the cost of renewable energy, especially wind energy and mini hydel, comes down sharply after debt servicing is completed. Normally the debt will be serviced during the PPA period of 10 years. After the PPA expires, the renewable energy can be purchased at a much lower tariff, as the main component of the cost would have vanished. The fuel costs are zero in the case of wind energy and mini hydel. Hence renewable energy will become economical in the long run.

The National Electricity Policy states in para 5.12.1: "Non-conventional sources of energy being the most environment friendly, there is an urgent need to promote generation of electricity based on such sources of energy." Further, para 5.12.2 states: "Progressively the share of electricity from non-conventional sources would need to be increased as prescribed by State Electricity Regulatory Commissions."

Hence it is seen that the National Electricity Policy is in favour of the share of electricity from renewable sources being increased progressively rather than remaining static.

Section 86(1) (e) of the Electricity Act 2003 states that the State Commission shall promote co-generation and generation of electricity from renewable sources of energy by providing suitable measures for connectivity with the grid and sale of electricity to any person, and also specify, for purchase of electricity from such sources, a percentage of the total consumption of electricity in the area of a distribution licensee.

Further the Tariff Policy of 6$^{th}$ January 2006 states at para 6.4 that pursuant to provisions of Section 86(1)(e) of the Act, the Appropriate Commission shall fix a minimum percentage for purchase of energy from such sources taking into account availability of such resources in the region and its impact on retail tariffs. It is seen that the Tariff Policy clearly specifies a "minimum percentage" and not an upper limit.

Although the National Tariff Policy refers to a minimum limit, KERC has fixed a maximum limit or upper limit for the purchase of renewable energy. The fixation of an upper limit of 10% is not in accordance with the Electricity Act 2003, the National Electricity Policy and the National Tariff Policy.

Although the National Tariff Policy refers to a minimum share for renewable energy and not a maximum share, a complete reversal of KERC's Policy of fixing an upper limit may be too drastic. It would be prudent to have a gradual change of policy and to enhance the upper limit rather than abolish any upper limit. If the upper limit is enhance to 20%, it will ensure that further development of renewable energy in the State will not stop but will continue at a reasonable rate of growth. Renewable energy in Karnataka has a short history and it would not be reasonable to freeze all further development of renewable energy by adhering to the 10% cap.

After considering all the above factors at the Government level, hence the following order:

**Government Order No. EN 216 NCE 2006, Bangalore, Dated 2$^{nd}$ March 2007**

Government accords approval for the upper limit of the share of renewable energy in the total quantum of energy purchased by each ESCOM during a year to be enhanced to 20%.

By order and in the Name of the Governor of Karnataka

**SURESH B. KRISHNAPPANAVAR**

PR. 393

Under Secretary to Government,

Energy Department.

**Sub:** Allotment of Sharavathi pumped storage Scheme and Kali Pumped Storage Scheme to Karnataka Power Corporation Limited (KPCL) –Reg.

**Read:** 1) Managing Director, Karnataka Power Corporation Limited Letter No. A1 R1 A / 1315, dated 10/17-1-2007.

**Preamble:**

Managing Director, Karnataka Power Corporation Limited in letter Read at (1) above has informed that KPCL has identified Sharavathi Pumped Storage Scheme and Kali Pumped Storage Scheme in Karnataka. The shemes are as follows:

a) **Sharavathi Pumped Storage Scheme:**
A pumped storage scheme is proposed in the Sharavathi basin. A preliminary reconnaissance survey has indicated that the existing reservoirs at Talakalale and Gerusoppa tail race in Sharavathi basin could be utilized as upstream and downstream reservoirs with an underground power house with reversible turbines. The installed capacity envisaged is 800 MW and utilization of head is 450 Mtrs.

(b) **Kali Pumped Storage Scheme :**
Kalinadi River Basin, a storage dam across Barehalla on the left bank of Kali river is proposed for the upstream reservoir and the existing reservoir at Kadra could be utilized as downstream reservoirs with an Underground Power House in between with reversible turbines. The installed capacity envisaged is 600 MW and utilization of head is about 360 Mtrs.

Further MD, KPCL has informed that the above subject was discussed in the KPCL Board of Directors' 205$^{th}$ Meeting. The Board approved to take up investigation works on the above schemes and also to request Government of Karnataka for allotment of the above schemes to KPCL, accordingly MD, KPCL vide Ref. (1) above has requested the Government to allot the following schemes to KPCL:

- Pumped Storage Scheme in Sharavathi basin with existing Talakalale reservoir and Gerusoppa reservoir as upper and lower reservoirs respectively.
- Pumped Storage Scheme in Kali basin by creating the upper reservoir by constructing a dam across Barehalla near Kanur village and utilizing the existing Kadra reservoir as lower reservoir.

Proposal of KPCL has been examined at Government level and hence the following orders:

**Government Order No. EN 76 PPC 2006, Bangalore, Dated 3$^{rd}$ March 2007**

Government is pleased to allot the following Pumped Storage Schemes to Karnataka Power Corporation Limited (KPCL), a State Owned Generating Company.

- Pumped Storage Scheme in Sharavathi basin with existing Talakalale reservoir and Gerusoppa reservoir as upper and lower reservoirs respectively.
- Pumped Storage Scheme in Kali basin by creating the upper reservoir by constructing a dam across Barehalla near Kanur village and utilizing the existing Kadra reservoir as lower reservoir.

Karnataka Power Corporation Limited shall take necessary steps to prepare Detailed Project Reports of the above Schemes and also take action to obtain all statutory and non-statutory clearances from the respective Authorities.

By order and in the Name of the Governor of Karnataka

PR. 433

**SURESH B. KRISHNAPPANAVAR**
Under Secretary to Government,
Energy Department.

**ವಸತಿ ಸಚಿವಾಲಯ**

**ವಿಷಯ:** ಬಳ್ಳಾರಿ ಜಿಲ್ಲೆ ಕಮಲಾಪುರ ನಗರ ಆಶ್ರಯ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಎಂ/1998, ದಿನಾಂಕ: 10–4–2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಬಳ್ಳಾರಿ ಜಿಲ್ಲೆ, ಕಮಲಾಪುರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ/98/ಹೆಚ್‌ಎಎಸ್/2006 (ಭಾ), ಬೆಂಗಳೂರು, ದಿನಾಂಕ: 6ನೇ ಜುಲೈ 2007**

ಮೇಲ್ಕಂಡ ಸಂದರ್ಭದಲ್ಲಿ ಬಳ್ಳಾರಿ ಜಿಲ್ಲೆ, ಕಮಲಾಪುರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಶ್ರೀ ಸೈಯದ್ ಸೊಬೂಬ್ ತಂದೆ ಸೈಯದ್ ಖಲೀಲ್ ವುಲ್ಲಾ, 7ನೇ ವಾರ್ಡ್ ಕಮಲಾಪುರ. | ಸದಸ್ಯರು |
| 2 | ಶ್ರೀ ಪಿ. ವಿಶ್ವನಾಥ ಸತ್ಯನಾರಾಯಣ ತಂದೆ ಪಿ. ಅಶ್ವತ್ ನಾರಾಯಣ, 11ನೇ ವಾರ್ಡ್, ಕಮಲಾಪುರ | ಸದಸ್ಯರು |
| 3 | ಶ್ರೀ ಕರಿಬಸಪ್ಪ ತಂದೆ ಕೆ. ಪರುಶರಾಮಪ್ಪ, ಕುರುಬರ ಓಣಿ, ಕಮಲಾಪುರ | ಸದಸ್ಯರು |
| 4 | ಶ್ರೀಮತಿ ಹೆಚ್. ನೀಲಮ್ಮ, ಅಂಬೇಡ್ಕರ್ ನಗರ, ಕಮಲಾಪುರ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1543

**ರಂಗಮ್ಮ**

ಪೀಠಾಧಿಕಾರಿ–2, ವಸತಿ ಇಲಾಖೆ

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಂ/1998, ದಿನಾಂಕ: 10–4–2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ/37/ಹೆಚ್ಎಎಸ್/2006, ಬೆಂಗಳೂರು, ದಿನಾಂಕ: 31ನೇ ಜುಲೈ 2007**

ಮೇಲ್ಕಂಡ ಸಂದರ್ಭದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಶ್ರೀ ಗಂಗಾಧರ ಬಿನ್ ಶ್ರೀ ಸೋಮಪ್ಪ, ಹೊಸರಸ್ತೆ, ಪಾಂಡೇಶ್ವರ, ಮಂಗಳೂರು | ಸದಸ್ಯರು |
| 2 | ಶ್ರೀ ನವೀನ್ ಮರೋಳಿ ಬಿನ್ ಶ್ರೀ ಐತಪ್ಪ, ಶ್ರೀ ಸೂರ್ಯನಾರಾಯಣ ದೇವಸ್ಥಾನದ ಹತ್ತಿರ, ಗರಡಿ, ಮರೋಳಿ, ಮಂಗಳೂರು | ಸದಸ್ಯರು |
| 3 | ಶ್ರೀ ಅನಿಲ್ ಜೋಷ್ ಬಿನ್ ಪಿ.ಎನ್. ಅಂಡ್ರ್ಯೂ, ಬೊಂದೆಲ್ ಚರ್ಚ್ ಕಾಂಪೌಂಡ್ ಹತ್ತಿರ, ಬೊಂದೆಲ್ ಅಂಚೆ, ಮಂಗಳೂರು–8. | ಸದಸ್ಯರು |
| 4 | ಶ್ರೀಮತಿ ಚೂಡಾಮಣಿ ಎಸ್. ಬಂಗೇರ, ಮುಲ್ಲಕಾಡು, ಕಾವೂರು ಅಂಚೆ, ಮಂಗಳೂರು–15. | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1544

**ರಂಗಮ್ಮ**

ಪೀಠಾಧಿಕಾರಿ–2, ವಸತಿ ಇಲಾಖೆ

**ವಿಷಯ:** ಬಾಗಲಕೋಟೆ ಜಿಲ್ಲೆ, ಇಲಕಲ್ ಪುರಸಭೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಂ/1998, ದಿನಾಂಕ: 10–4–2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಬಾಗಲಕೋಟೆ ಜಿಲ್ಲೆಯ ಇಲಕಲ್ ಪುರಸಭೆ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ/181/ಹೆಚ್ಎಎಸ್/2006, ಬೆಂಗಳೂರು, ದಿನಾಂಕ: 6ನೇ ಜುಲೈ 2007**

ಮೇಲ್ಕಂಡ ಸಂದರ್ಭದಲ್ಲಿ ಬಾಗಲಕೋಟೆ ಜಿಲ್ಲೆಯ ಇಲಕಲ್ ಪುರಸಭೆ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಶ್ರೀ ದಾಮೋದರ್ ಡಾಗ, ಸಾ: ಇಲಕಲ್, ಹುನಗುಂದ ತಾ: | ಸದಸ್ಯರು |
| 2 | ಶ್ರೀ ಗುಡೂಸಾಬ್, ವೆಂಕಟಾಪುರ, ಸಾ: ಇಲಕಲ್, ಹುನಗುಂದ ತಾ: | ಸದಸ್ಯರು |
| 3 | ಶ್ರೀ ಮೋಹನ್ ಮರೋಳ ಸಾ: ಇಲಕಲ್, ಹುನಗುಂದ ತಾ: | ಸದಸ್ಯರು |
| 4 | ಶ್ರೀಮತಿ ಶಾಂತಾಬಾಯಿ ಶಂಕರಪ್ಪ ಜಳಕಿ, ಸಾ: ಇಲಕಲ್, ಹುನುಗುಂದ ತಾ: | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1545

**ರಂಗಮ್ಮ**

ಪೀಠಾಧಿಕಾರಿ–2, ವಸತಿ ಇಲಾಖೆ

**ವಿಷಯ:** ಹುಬ್ಬಳ್ಳಿ ಜಿಲ್ಲೆಯ ಹುಬ್ಬಳ್ಳಿ ಗ್ರಾಮೀಣ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂ.ವಇ/42/ಹೆಚ್ಎಂ/1998, ದಿನಾಂಕ: 10–4–2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಹುಬ್ಬಳ್ಳಿ ಜಿಲ್ಲೆಯ ಹುಬ್ಬಳ್ಳಿ ಗ್ರಾಮೀಣ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ/3/ಹೆಚ್ಎಎಸ್/2007, ಬೆಂಗಳೂರು, ದಿನಾಂಕ: 12ನೇ ಜುಲೈ 2007**

ಮೇಲ್ಕಂಡ ಸಂದರ್ಭದಲ್ಲಿ ಹುಬ್ಬಳ್ಳಿ ಜಿಲ್ಲೆಯ ಹುಬ್ಬಳ್ಳಿ ಗ್ರಾಮೀಣ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧ್ಯಕ್ಷರನ್ನು ಹಾಗೂ ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಶ್ರೀ ಜಗದೀಶ ಶೆಟ್ಟರ, ಕಂದಾಯ ಸಚಿವರು | ಅಧ್ಯಕ್ಷರು |
| 2 | ಶ್ರೀ ನಾಗರಾಜ ಸಿಂಧೆ, ನಾಗಶೆಟ್ಟಿಕೊಪ್ಪ | ಸದಸ್ಯರು |
| 3 | ಶ್ರೀ ನಿಜಲಿಂಗಪ್ಪ ಕೋಡಿಹಾಳ, ಗಿರಣಿಚಾಳ, ಹುಬ್ಬಳ್ಳಿ | ಸದಸ್ಯರು |
| 4 | ಶ್ರೀ ಇಮತಿಯಾಜ ಮುಲ್ಲಾ, ಕೃಷ್ಣಾನಗರ, ದೇಶಪಾಂಡೆನಗರ, ಹುಬ್ಬಳ್ಳಿ | ಸದಸ್ಯರು |
| 5. | ಶ್ರೀಮತಿ ಸರೋಜಮ್ಮ ಶಾಸ್ತ್ರಿ, ರಾಘವೇಂದ್ರ ಕಾಲೋನಿ, ಲಿಂಗರಾಜಪುರ, ಹುಬ್ಬಳ್ಳಿ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.1546

**ರಂಗಮ್ಮ**

ಪೀಠಾಧಿಕಾರಿ–2, ವಸತಿ ಇಲಾಖೆ

**ಸಹಕಾರ ಸಚಿವಾಲಯ**

**ವಿಷಯ:** ಕರ್ನಾಟಕ ಸಹಕಾರಿ ಕೈಮಗ್ಗ ನೇಕಾರರ ಮಹಾಮಂಡಳದ (ಕಾವೇರಿ ಹ್ಯಾಂಡ್ ಲೂಮ್ಸ್) 2004–05 ಮತ್ತು 2005–06ನೇ ಸಾಲುಗಳ ವಾರ್ಷಿಕ ಮಹಾ ಸಭೆಗಳನ್ನು ನಡೆಸಲು ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂ. ಸಇ/35/ಸಿಐಎಂ/2006, ಬೆಂಗಳೂರು, ದಿನಾಂಕ: 27–5–2006.

2) ಕೈಮಗ್ಗ ಮತ್ತು ಜವಳಿ ಇಲಾಖೆಯ ಪತ್ರ ಸಂಖ್ಯೆ ಕೈಜಇ/ಜಂ.ರಿ.ಟಿ.3/ಕಾಹ್ಯಾ/ವಾಮಸ/ 06/ 2007–08, ದಿನಾಂಕ: 6–6–2007.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರದ ಆದೇಶ ಸಂ.ಸಇ 35 ಸಿಐಎಂ 2006, ದಿನಾಂಕ: 27–5–2006ರಲ್ಲಿ ಕರ್ನಾಟಕ ಸಹಕಾರ ಕೈಮಗ್ಗ ನೇಕಾರರ ಮಹಾಮಂಡಳದ 2004–05ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ: 31–3–2007ರ ವರೆಗೆ ಕಾಲಾವಕಾಶ ನೀಡಲಾಗಿತ್ತು. ಉಲ್ಲೇಖ (2)ರ ಪತ್ರದಲ್ಲಿ, ಮಹಾಮಂಡಳವು ತನ್ನ ದೈನಂದಿನ ವ್ಯವಹಾರ ನಡೆಸಲು ತೀವ್ರ ತೆರನಾದ ಹಣಕಾಸಿನ ದುಸ್ಥಿತಿ ಮತ್ತು ಕೊರತೆಯಿರುವುದರಿಂದ ಇಂತಹ ಕ್ಲಿಷ್ಟ ಪರಿಸ್ಥಿತಿಯಲ್ಲಿ ವಾರ್ಷಿಕ ಮಹಾಸಭೆಯನ್ನು ಕರೆಯುವುದು ಸೂಕ್ತವಲ್ಲವೆಂದು ತಿಳಿಸಿ ಮಹಾಮಂಡಳದ 2004–05, 2005–06 ಮತ್ತು 2006–07ನೇ ಸಾಲುಗಳ ವಾರ್ಷಿಕ ಮಹಾಸಭೆಗಳನ್ನು ನಡೆಸಲು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರನ್ವಯ ದಿನಾಂಕ: 1–4–2007ರಿಂದ 31–3–2008ರವರೆಗೆ ಒಂದು ವರ್ಷದ ಅವಧಿಗೆ ಮುಂದೂಡಲು ಕಾಲಾವಕಾಶ ನೀಡಬೇಕೆಂದು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ. ಸಇ/22/ಸಿಐಎಂ/2007, ಬೆಂಗಳೂರು, ದಿನಾಂಕ: 23ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಕರ್ನಾಟಕ ಸಹಕಾರ ಕೈಮಗ್ಗ ನೇಕಾರರ ಮಹಾ ಮಂಡಳ ನಿಯಮಿತ (ಕಾವೇರಿ ಹ್ಯಾಂಡ್‌ಲೂಮ್ಸ್) ಇದರ 2004–05 ಹಾಗೂ 2005–06ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ನಡೆಸಲು ದಿನಾಂಕ: 31–3–2008ರವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಸದರಿ ಮಹಾಮಂಡಳಕ್ಕೆ ಪ್ರಕರಣ 27(1)ರ ಉಪಬಂಧಗಳು ಈ ಕೆಳಗಿನ ಮಾರ್ಪಾಡುಗಳೊಂದಿಗೆ ಅನ್ವಯವಾಗುತ್ತವೆ ಎಂದು ನಿರ್ದೇಶಿಸುತ್ತದೆ. ಎಂದರೆ,

**27ರ ಪ್ರಕರಣದಲ್ಲಿ**

27ನೇ ಪ್ರಕರಣದ ಉಪ ಪ್ರಕರಣ (1) ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ:

ಅ) 2004–05ನೇ ಸಾಲಿಗೆ ಸಂಬಂಧಿಸಿದಂತೆ "ಮೂವತ್ತು ತಿಂಗಳು" ಮತ್ತು

ಆ) 2005–06ನೇ ಸಾಲಿಗೆ ಸಂಬಂಧಿಸಿದಂತೆ "ಹದಿನೆಂಟು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಪ್ರಕರಣ 27(1)ಕ್ಕೆ ಮಾಡಿದ ಮಾರ್ಪಾಡು ದಿನಾಂಕ: 31–3–2008ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಕಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1547

**ಸಿ. ಶ್ರೀನಿವಾಸ್**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

| | | |
|---|---|---|
| **ವಿಷಯ:** | ಪ್ರೊ॥ ಮೊಹಮದ್ ರಹಮತುಲ್ ಹಕ್, ಉರ್ದು ಪ್ರೊಫೇಸರ್, ಶ್ರೀ ಸಿದ್ದಗಂಗಾ ಕಲಾ, ವಿಜ್ಞಾನ ಮತ್ತು ವಾಣಿಜ್ಯ ಮಹಿಳಾ ಕಾಲೇಜು, ತುಮಕೂರು ಅವರನ್ನು ರಿಜಿಸ್ಟ್ರಾರ್, ಕರ್ನಾಟಕ ಉರ್ದು ಅಕಾಡೆಮಿ ಇಲ್ಲಿಗೆ ಒಪ್ಪಂದದ ಮೇರೆಗೆ ನೇಮಕ ಮಾಡಿರುವ ಸಂಬಂಧ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸುವ ಬಗ್ಗೆ. | |
| **ಓದಲಾಗಿದೆ:** | 1 | ಅಧಿಸೂಚನೆ ಸಂಖ್ಯೆ: ಸಂಕಇ 24 ಕೆಎಂಯು 2006 ದಿ: 5–2–2007. |
| | 2 | ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಸನಿ/55/ಸಿಬ್ಬಂದಿ/2006 ದಿನಾಂಕ: 12–6–2007. |

**ಪ್ರಸ್ತಾವನೆ :**

ತುಮಕೂರಿನ ಶ್ರೀ ಶ್ರೀ ಸಿದ್ದಗಂಗಾ ಕಲಾ, ವಿಜ್ಞಾನ ಮತ್ತು ವಾಣಿಜ್ಯ ಮಹಿಳಾ ಕಾಲೇಜು, ಇಲ್ಲಿ ಉರ್ದು ಪ್ರೊಫೇಸರ್ ಆಗಿ ಕಾರ್ಯನಿರ್ವಹಿಸುತ್ತಿದ್ದ ಪ್ರೊ॥ ಮಹಮದ್ ರಹಮತುಲ್ ಹಕ್ ಅವರನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ: 5–2–2007ರ ಅಧಿಸೂಚನೆಯಲ್ಲಿ ದಿನಾಂಕ: 16–9–2006ರಿಂದ ಜಾರಿಗೆ ಬರುವಂತೆ ರಿಜಿಸ್ಟ್ರಾರ್, ಕರ್ನಾಟಕ ಉರ್ದು ಅಕಾಡೆಮಿ, ಈ ಹುದ್ದೆಗೆ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 15(1)(ಬಿ)(ii) ರನ್ವಯ ಒಪ್ಪಂದದ ಮೇರೆಗೆ ನೇಮಕ ಮಾಡಿಕೊಳ್ಳಲಾಯಿತು. ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 12–6–2007ರ ಪತ್ರದಲ್ಲಿ ಇವರ ನೇಮಕಾತಿಯ ಕರಡು ಷರತ್ತು ಮತ್ತು ನಿಬಂಧನೆಗಳನ್ನು ಕಳುಹಿಸಿ ಅದನ್ನು ಅನುಮೋದಿಸಿ ಸರ್ಕಾರಿ ಆದೇಶ ಹೊರಡಿಸುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ.: ಸಂಕಇ:24:ಕೆಎಂಯು: 2006 / ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2007**

ಪ್ರೊ॥ ಮಹಮದ್ ರಹಮತುಲ್ ಹಕ್, ಉರ್ದು ಪ್ರಾಧ್ಯಾಪಕರು, ಶ್ರೀ ಸಿದ್ದಗಂಗಾ ಕಲಾ, ವಿಜ್ಞಾನ ಮತ್ತು ವಾಣಿಜ್ಯ ಮಹಿಳಾ ಕಾಲೇಜು, ತುಮಕೂರು ಇವರನ್ನು ರಿಜಿಸ್ಟ್ರಾರ್, ಕರ್ನಾಟಕ ಉರ್ದು ಅಕಾಡೆಮಿ, ಈ ಹುದ್ದೆಗೆ ಒಪ್ಪಂದದ ಆಧಾರದ ಮೇಲೆ ನೇಮಕ ಮಾಡಿಕೊಂಡ ಕುರಿತಂತೆ ಈ ಆದೇಶಕ್ಕೆ ಅನುಬಂಧಿಸಲಾದ ಷರತ್ತು ಮತ್ತು ನಿಬಂಧನೆಗಳನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ಸರ್ಕಾರಿ ಆದೇಶ ಸಂಖ್ಯೆ. ಸಂಕಇ 24 ಕೆಎಂಯು 2006, ದಿನಾಂಕ: 25ನೇ ಆಗಸ್ಟ್ 2007**

**ಪ್ರೊ॥ ಮಹಮದ್ ರಹಮತುಲ್ ಹಕ್, ರಿಜಿಸ್ಟ್ರಾರ್, ಕರ್ನಾಟಕ ಉರ್ದು ಅಕಾಡೆಮಿ, ಬೆಂಗಳೂರು ಇವರಿಗೆ ಸಂಬಂಧಿಸಿದಂತೆ, ಷರತ್ತು ಮತ್ತು ನಿಬಂಧನೆಗಳು**

1) **ನೇಮಕದ ಅವಧಿ :**
ಕರ್ನಾಟಕ ಉರ್ದು ಅಕಾಡೆಮಿಯ ರಿಜಿಸ್ಟ್ರಾರ್ ಹುದ್ದೆಗೆ ಒಪ್ಪಂದದ ಮೇಲೆ ನೇಮಕವಾಗಿದ್ದು, ಹುದ್ದೆಯ ಪ್ರಭಾರವನ್ನು ದಿನಾಂಕ: 16–9–2006ರಂದು ವಹಿಸಿಕೊಂಡಿದ್ದು, ಈ ಅವಧಿ ಮೂರು ವರ್ಷಗಳು ಅಥವಾ ಅವರು ವಯೋನಿವೃತ್ತಿ ಹೊಂದುವ ದಿನಾಂಕದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಇರುವುದು.

2) **ವೇತನ/ತುಟ್ಟಿಭತ್ಯೆ/ಮನೆ ಬಾಡಿಗೆ ಭತ್ಯೆ/ನಗರ ಪರಿಹಾರ ಭತ್ಯೆ:**
ಒಪ್ಪಂದದ ಮೇಲಿನ ಅವಧಿಯಲ್ಲಿ ಅವರು ಹೊಂದಿರುವ ಹುದ್ದೆಗೆ ಹಾಲಿ ಪಡೆಯುತ್ತಿರುವ ವೇತನ ಹಾಗೂ ವೇತನ ಶ್ರೇಣಿಯಲ್ಲಿ ವೇತನ ಮತ್ತು ಭತ್ಯೆಗಳನ್ನು ಪಡೆಯಲು ಅರ್ಹರಿರುವರು.

3) **ಸೇರುವ ಕಾಲದ ವೇತನ ಮತ್ತು ವರ್ಗಾವಣೆಯ ಭತ್ಯೆ:**
ಇವುಗಳನ್ನು ಒಪ್ಪಂದದ ಮೇಲೆ ಹೋಗುವಾಗ ಮತ್ತು ಅಲ್ಲಿಂದ ಹಿಂದಿರುಗುವಾಗ ರಾಜ್ಯ ಸರ್ಕಾರದ ನಿಯಮಗಳ ಆದೇಶದಡಿಯಲ್ಲಿ ಪಡೆಯಲು ಅರ್ಹರಿರುವರು.

4) **ಪರಿಹಾರ ಭತ್ಯೆ:**
ಒಪ್ಪಂದದ ಸೇವೆಗೆ ಸೇರಿದ ನಂತರ ಕೈಗೊಂಡ ಪ್ರಯಾಣಗಳಿಗೆ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಸಂಬಂಧಿತ ನಿಯಮಗಳ ಪ್ರಕಾರ ಪಡೆಯಲು ಅರ್ಹರಿರುತ್ತಾರೆ.

5) **ರಜೆ ನಿಯಮಗಳು:**
ಮಾತೃ ಸಂಸ್ಥೆಯಲ್ಲಿ ಅವರಿಗೆ ಅನ್ವಯವಾಗುವ ರಜೆ ನಿಯಮಗಳಿಗೆ ಒಳಪಟ್ಟಿರುತ್ತವೆ.

6) **ಗಳಿಕೆ ರಜೆ:**
ಮಾತೃ ಸಂಸ್ಥೆಯಲ್ಲಿ ನಿಯಮಗಳ ಪ್ರಕಾರ ಗಳಿಕೆ ರಜೆ ನಗದೀಕರಣ ಸೌಲಭ್ಯಕ್ಕೆ ಅರ್ಹರಿರುತ್ತಾರೆ.

7) **ಒಪ್ಪಂದದ ಮೇರೆಗೆ ನೌಕರರಿಗೆ ಮುಂಬಡ್ತಿ:**
ವರ್ಗಾವಣೆ ಮಾಡುವುದು ಅಥವಾ ಹೆಚ್ಚುವರಿ ಕಾರ್ಯಭಾರವನ್ನು ವಹಿಸುವುದು ಅಥವಾ ಹೆಚ್ಚುವರಿ ಸಂಭಾವನೆ ನೀಡುವುದು ಅಥವಾ ಸೌಲಭ್ಯಗಳನ್ನು ಒದಗಿಸುವುದು ಇವುಗಳನ್ನು ಸರ್ಕಾರದ ಪೂರ್ವಾನುಮತಿ ಪಡೆಯದೆ ಮಾಡತಕ್ಕದ್ದಲ್ಲ.

8) ಇವರ ಮಾತೃ ಸಂಸ್ಥೆಯಲ್ಲಿ ಸರ್ಕಾರದಿಂದ ಅಂಗೀಕಾರಗೊಂಡ ಇತರ ಸೌಲಭ್ಯಗಳು ಇದ್ದಲ್ಲಿ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

**ಎಂ.ಎಸ್. ಶಿವರಾಮ್**
ಪಿ.ಆರ್.1548 ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಮಾನ್ಯ ಉಪ ಮುಖ್ಯಮಂತ್ರಿಯವರ ಸಚಿವಾಲಯಕ್ಕೆ ಅಪರ ಆಪ್ತ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:17:ಸಸಿವಿ:2006, ದಿನಾಂಕ: 18–3–2006.
2 ಮಾನ್ಯ ಉಪ ಮುಖ್ಯಮಂತ್ರಿಯವರ ಟಿಪ್ಪಣಿ ಸಂಖ್ಯೆ:ಉಮುಮ/ಗೃ/2358/2007, ದಿನಾಂಕ: 20–6–2007.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ: 18–3–2006ರ ಸರ್ಕಾರಿ ಆದೇಶದಲ್ಲಿ ಮಾನ್ಯ ಉಪ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಇನ್ನಿತರೆ ಹುದ್ದೆಗಳೊಂದಿಗೆ ಒಂದು ಅಪರ ಆಪ್ತ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಲಾಗಿದ್ದು, ಸದರಿ ಹುದ್ದೆಯಲ್ಲಿ ಹಾಲಿ ಕೆಎಎಸ್ ಅಧಿಕಾರಿಯೊಬ್ಬರು ಕಾರ್ಯನಿರ್ವಹಿಸುತ್ತಿದ್ದಾರೆ. ಮೇಲೆ (2)ರಲ್ಲಿ ಓದಲಾದ ದಿನಾಂಕ: 20–6–2007ರ ಟಿಪ್ಪಣಿಯಲ್ಲಿ ಮಾನ್ಯ ಉಪ ಮುಖ್ಯಮಂತ್ರಿಯವರ ಸಚಿವಾಲಯಕ್ಕೆ ಇನ್ನೊಂದು ಅಪರ ಆಪ್ತ ಕಾರ್ಯದರ್ಶಿ ಹುದ್ದೆಯು ಅಗತ್ಯವಿರುವುದರಿಂದ ಸದರಿ ಹುದ್ದೆಯನ್ನು ಸೃಜಿಸುವಂತೆ ಕೋರಿರುತ್ತಾರೆ.

ಅದರಂತೆ ಈ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ. ಸಿಆಸುಇ:38:ಸಸಿವಿ:2007, ಬೆಂಗಳೂರು, ದಿನಾಂಕ: 20ನೇ ಆಗಸ್ಟ್ 2007.**

ಮಾನ್ಯ ಉಪ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ಈಗ ಹಾಲಿ ಇರುವ ಅಪರ ಆಪ್ತ ಕಾರ್ಯದರ್ಶಿ ಹುದ್ದೆಯೊಂದಿಗೆ ಇನ್ನೊಂದು ಅಪರ ಆಪ್ತ ಕಾರ್ಯದರ್ಶಿ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥವಾ ಪ್ರಸ್ತುತ ಉಪ ಮುಖ್ಯಮಂತ್ರಿಯವರ ಪದಾವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ಸೃಜಿಸಿ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ:ಆಇ 1467 ವೆಚ್ಚ–5 2007 ದಿನಾಂಕ: 10–8–2007ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಪಿ.ಆರ್. 1549 **ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ
(ಸೇವೆಗಳು–3)